# ಮಾನಸಿ

ತಿಂಗಳ ಪತ್ರಿಕೆ ಜನವರಿ 1996



- ಬಾನ್ವರಿದೇವಿಯ ಕಥೆ
- ಕೆಲಸದ ಹಕ್ಕಿಗಾಗಿ ಸಾಥಿನರ ಹೋರಾಟ
- ಸೌಂದರ್ಯ ಸ್ಪರ್ಧೆಯ ಮಿಥ್ಯ – ಸತ್ಯಗಳು

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 11 ಸಂಚಿಕೆ : 1

ಜನವರಿ - 1996





ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067



ಸೂಚನೆ : ಬಿಡಿ ಪ್ರತಿ : **3-00 ರೂ.**
ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ...**




ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು-೫೬೦ ೦೬೭

# ಸಂಪಾದಕೀಯ



ರಾಜಸ್ಥಾನದಲ್ಲಿ ಬಾನ್ವರಿದೇವಿಯ ಮೇಲೆ ನಡೆದ ಗುಂಪು ಅತ್ಯಾಚಾರದ ಪ್ರಕರಣ ಮಥುರಾ, ರಮೀಜಾಬಿಯ ಪ್ರಕರಣಗಳನ್ನು ಮತ್ತೆ ನೆನಪಿಗೆ ತರಿಸುತ್ತದೆ. ಇಂತಹ ಭೀಕರ ಪ್ರಕರಣಗಳು ಹೆಚ್ಚುತ್ತಾ ಹೋದ ಹಾಗೆಲ್ಲಾ ಈ ಪ್ರಕರಣಗಳನ್ನು ಮುಚ್ಚಿ ಹಾಕಿಬಿಡುವ ಯತ್ನಗಳೂ ಅಷ್ಟೇ ಭೀಕರವಾಗಿ ಅಷ್ಟೇ ವ್ಯವಸ್ಥಿತವಾಗಿ ನಡೆಯುವುದು ನಮ್ಮ ಕಣ್ಣ ಮುಂದಿನ ಸತ್ಯ.

ಬಾನ್ವರಿದೇವಿಯ ಮೇಲೆ ನಡೆದ ಗುಂಪು ಅತ್ಯಾಚಾರದ ಪ್ರಕರಣದಲ್ಲಿ ರಾಜಸ್ತಾನ ಸರ್ಕಾರ ತೆಗೆದುಕೊಂಡ ನಿಲುವು ಹಾಗೂ ತೋರಿಸುತ್ತಿರುವ ನಿರ್ಲಕ್ಷ್ಯ ಹಲವಾರು ಸಂಗತಿಗಳನ್ನು ನಮಗೆ ಸ್ಪಷ್ಟಪಡಿಸುತ್ತದೆ. ಮಹಿಳೆಯರ ಪ್ರಶ್ನೆಗೆ, ಮಹಿಳೆಯರ ಮೇಲಿನ ಹಿಂಸೆಗೆ ರಾಜ್ಯ - ವೈರುದ್ಧ್ಯಗಳಿಂದ ಪ್ರತಿಕ್ರಿಯಿಸುವ ರೀತಿ ಇಲ್ಲಿ ಸ್ಪಷ್ಟವಾಗಿದೆ. ಮಹಿಳೆಯರಿಗೆ ಸಶಕ್ತತೆ ಭರಿಸುವ ಹಂತದಲ್ಲಿ ಒಂದು ಕಡೆ ಮಹಿಳಾ ಅಭಿವೃದ್ಧಿ ಕಾರ್ಯಕ್ರಮ (WDP) ಯೋಜಿಸಿಕೊಂಡಿರುವ ಸರ್ಕಾರ - ಇನ್ನೊಂದು ಕಡೆ ಸಾಮಾಜಿಕ ಬದಲಾವಣೆಗಾಗಿ ಸಮುದಾಯ ಕಾರ್ಯಕರ್ತೆಯಾಗಿ ಕೆಲಸ ಮಾಡುತ್ತಿದ್ದ 'ಸಾಥಿನ್'— ಬಾನ್ವರಿದೇವಿಗೆ ನೀಡಿದ ನ್ಯಾಯವಾದರೂ ಏನು ? ನೀಡಿದ ಸಶಕ್ತತೆಯಾದರೂ ಏನು ? ಮಹಿಳೆಯರನ್ನು ಸಶಕ್ತರನ್ನಾಗಿಸುವ ಹಂತದಲ್ಲಿಯೇ ಮಹಿಳೆಯರನ್ನು ನಿಶ್ಚೇಷ್ಟಿತರನ್ನಾಗಿಸಿಬಿಡುವ ಇಂತಹ ಪ್ರಕರಣ ಮಹಿಳೆಯ ವಿಚಾರದಲ್ಲಿನ ರಾಜ್ಯದ ವಿರೋಧೀ ನೀತಿಯನ್ನು ವ್ಯಕ್ತಪಡಿಸುತ್ತದೆ.

ರಾಜಸ್ತಾನದಲ್ಲಿ ಬಾಲ್ಯ ವಿವಾಹವನ್ನು ಕೊನೆಗೊಳಿಸುವ ಹಂತದಲ್ಲಿ ಸರ್ಕಾರಕ್ಕೆ ಬದ್ಧತೆಯಿಂದ ದುಡಿತ ಬಾನ್ವರಿದೇವಿಗಾದ ಅನ್ಯಾಯ ನಮ್ಮೆಲ್ಲರನ್ನೂ ಎಚ್ಚರಗೊಳಿಸಬೇಕಿದೆ. ಅಸಹಾಯಕ ಗಂಡನ ಮುಂದೆಯೇ ಆಕೆಯ ಮೇಲೆ ನಡೆದ ಗುಂಪು ಅತ್ಯಾಚಾರದ ಪ್ರಕರಣವನ್ನು ಮುಚ್ಚಿ ಹಾಕಲು ರಾಜ್ಯದ ಮಂತ್ರಿಗಳು ಕಾನೂನುಗಳಲ್ಲಿನ ಎಲ್ಲಾ ಮಿತಿಗಳನ್ನೂ ಬಳಸಿಕೊಳ್ಳುತ್ತಿರುವುದು ಒಂದು ದೊಡ್ಡ ದುರಂತದ ಸಂಗತಿ. ಹೆಂಗಸರ ಸಶಕ್ತತೆ, ಅಭಿವೃದ್ಧಿ, ಪ್ರಗತಿಯ ಹೆಸರಿನಲ್ಲಿ ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿಯೇ ತಮ್ಮ ಕೆಲಸಗಾರರನ್ನು ಕೆಲಸದ ಹಕ್ಕಿನಿಂದ ವಂಚಿಸುತ್ತಾ ಅಂಚಿಗೆ ತಳ್ಳಲಾಗುತ್ತಿದೆ. ಜತೆಗೆ, ತೀವ್ರ ಅಪಾಯಕರ ಸನ್ನಿವೇಶದಲ್ಲಿ ದುಡಿಯುವ ಅವರಿಗೆ ಸರ್ಕಾರದ ವತಿಯಿಂದ ಯಾವುದೇ ಭದ್ರತೆ ರಕ್ಷಣೆಗಳಿಲ್ಲ.

ಬಾನ್ವರಿದೇವಿಯ ಅತ್ಯಾಚಾರದ ಪ್ರಕರಣದಲ್ಲಿ ದೊರಕಬೇಕಾಗಿರುವ ನ್ಯಾಯ ಇಂದು ಎಲ್ಲಾ ಮಹಿಳಾ ಗುಂಪುಗಳ ಧ್ವನಿಯಾಗಬೇಕಿದೆ. ಅಭಿವೃದ್ಧಿಯ ಹೆಸರಿನಲ್ಲಿ ನಡೆಯುವ ಆರ್ಥಿಕ, ಮಾನಸಿಕ ಇತ್ಯಾದಿ ಶೋಷಣೆಗಳನ್ನು ವಿರೋಧಿಸುತ್ತಲೇ ಕೆಲಸ ಮಾಡುವ ಸ್ಥಳದಲ್ಲಿನ ರಕ್ಷಣೆಗಾಗಿ ಇಂದು ನಾವು ಒತ್ತಾಯಿಸಬೇಕಾಗಿದೆ. ಜೊತೆಗೆ ಮಹಿಳೆಯರ ಬಗೆಗಿರುವ ಸರ್ಕಾರದ ವೈರುಧ್ಯ ನೀತಿಗಳನ್ನು ಕೂಡಾ ನಾವು ವಿರೋಧಿಸಬೇಕಾಗಿದೆ.

# ಬಾನ್ವರಿದೇವಿಯ ಕಥೆ

ಓದಲು ಬರೆಯಲು ಬಾರದ ಬಾನ್ವರಿದೇವಿ ತನಗೆ ಮದುವೆಯಾದಾಗ ನಾಲ್ಕು ಐದು ವರ್ಷದ ಹುಡುಗಿ ಯಾಗಿದ್ದೆ ಅನ್ನುತ್ತಾಳೆ. ನೂರರ ನಂತರ ಎಣಿಸಲೂ ಬಾರದ ಇವಳು ಬರೀ ಊಹೆಯಿಂದ ತನಗೀಗ ನಲವತ್ತೆರಡು ವಯಸ್ಸಿರಬಹುದು ಅನ್ನುತ್ತಾಳೆ.

ರಾವಾಸ್ ಎಂಬ ಸಣ್ಣ ಹಳ್ಳಿಯ ಬಡ ಕುಂಬಾರ ಕುಟುಂಬದಲ್ಲಿ, ಗಂಡು ಮಕ್ಕಳಿಗೇ ವಿದ್ಯೆಯಿಲ್ಲದ ಕುಟುಂಬದಲ್ಲಿ ಹುಟ್ಟಿದ ಬಾನ್ವರಿದೇವಿ, ವಿದ್ಯೆಯ ಕನಸೂ ಕಾಣುವಂತಿರಲಿಲ್ಲ. ವಿದ್ಯುತ್ ಮತ್ತು ನೀರೂ ಇಲ್ಲದ ಕುಗ್ರಾಮದಲ್ಲಿ ಬೆಳೆದ ಐದುವರ್ಷದ ಹುಡುಗಿ ಬತೇರಿ ಕುಟುಂಬದ ಮೋಹನ್‌ಲಾಲನೊಂದಿಗೆ ಮದುವೆಯಾದಳು. ಅತ್ತೆ ಮಾವ, ಮೈನೆರೆದ ಮೇಲೆ ಹುಡುಗಿಯನ್ನು ಕರೆದೊಯ್ದರು. ಮನೆ ಹೊಲ ಗದ್ದೆಗಳ ಹೆಣ ಚಾಕರಿಯ ನಡುವೆ ವಿಮಲ, ಸತ್ಯನಾರಾಯಣ, ರಾಮೇಶ್ವರಿ ಮತ್ತು ಮುಖೇಶ ಎಂಬ ನಾಲ್ಕು ಮಕ್ಕಳಿಗೆ ಜನ್ಮವಿತ್ತಳು. ಅತ್ತೆ ಮಾವಂದಿರ ವಿರೋಧ ಲೆಕ್ಕಿಸದೇ ಶಸ್ತ್ರ ಚಿಕಿತ್ಸೆಗೆ ಒಳಗಾದ ಬಾನ್ವರಿ ಮೂಲತಃ ಧೈರ್ಯದ ಪ್ರವೃತ್ತಿ ಯವಳು. ಇಪ್ಪತ್ತೆರಡು ವರ್ಷವಾಗುವವರೆಗೆ ಹೆಣ್ಣು ಮಕ್ಕಳಿಗೆ ಮದುವೆ ಮಾಡಲೇಬಾರದು ಎಂಬುದು ಈ ಹಂತದಲ್ಲಿ ಅವಳು ತಳೆದ ನಿಲುವು. ಮದುವೆ, ಹೆಣ್ಣಿಗೆ ಕೊಡುವುದು ದೈಹಿಕ ಮಾನಸಿಕ ನೋವು ಮಾತ್ರ ಎಂಬುದು ಅವಳ ಅನುಭವ. ಕೊನೇಪಕ್ಷ ಓದುವ ಬರೆಯುವಷ್ಟಾದರೂ ವಿದ್ಯೆ ಕೊಡದಿದ್ದರೆ ಅತ್ತೆ ಮನೆಯ ಹೆಣ್ಣಿನ ಬಾಳು ಜೀವಂತ ಸಾವು ಎಂದು ಗೊತ್ತಿದ್ದೂ ತನ್ನ ಇಬ್ಬರೂ ಹೆಣ್ಣು ಮಕ್ಕಳನ್ನೂ ಅವರ ಐದನೇ ವರ್ಷದಲ್ಲಿ ಮದುವೆ ಮಾಡಬೇಕಾ ಯಿತು. ಇದು ನಾಲ್ಕು ಸಾವಿರ ರೂ.ಗಳ ಸಾಲದ ಹಣದಲ್ಲಿ ನೆರವೇರಿತು.

ಮಡಿಕೆ ಮಾಡುವ ಕೆಲಸಕ್ಕೆ ಕೊಡುತ್ತಿದ್ದ ಸಂಬಳ ಹನ್ನೊಂದು ರೂ.ಗೆ ಹೆಬ್ಬೆಟ್ಟೊತ್ತಿಸಿಕೊಂಡು ಹತ್ತು ರೂ. ಕೊಡುತ್ತಿರುವುದು ತಿಳಿಯುತ್ತಲೇ ಬಾನ್ವರಿ ಇದನ್ನು ಪ್ರತಿಭಟಿಸಿದಳು. ಅದರ ಫಲವಾಗಿ ಅವಳಿಗೆ ಹನ್ನೊಂದು ರೂ. ದೊರೆಯಿತು. ಆಗ ವಿದ್ಯೆಯೇ ಶಕ್ತಿ ಎಂಬುದು ಅವಳ ಅರಿವಿಗೆ ಬಂತು. ಈ ಘಟನೆ ಯಿಂದಾಗಿಯೇ ರಾಜಸ್ಥಾನ ಸರ್ಕಾರದ ಮಹಿಳಾ ಅಭಿವೃದ್ಧಿಯೋಜನೆ (Womens Development Programme)ನಲ್ಲಿ ಅವಳಿಗೆ ಆಸಕ್ತಿ ಹುಟ್ಟಿತು. ಅವಳು ಅದನ್ನು ಸೇರಿ ಸಾಥಿನ್ (ಇತರರ ಜೊತೆಗಾತಿ ಕಷ್ಟ ದಲ್ಲಿರುವವರಿಗೆ ಸಹಾಯ ಮಾಡುವವಳು) ಆದಳು. ಅವಳ ಗಂಡ ಇದಕ್ಕೆ ಅಡ್ಡಿ ಬರಲಿಲ್ಲ. ಸರ್ಕಾರ ಕೊಡುತ್ತಿದ್ದ 250 ರೂ. ಮಾಹೆಯಾನ ಸಂಬಳಕ್ಕಾಗಿ ಮನೆಮನೆಗೂ ತಿರುಗಿ ಹೆಂಗಸರೊಂದಿಗೆ ಚರ್ಚಿಸಿ ಬಾಲ್ಯವಿವಾಹದಂತಹ ಅನಿಷ್ಟ ಪದ್ಧತಿಗಳ ವಿರುದ್ಧ ಹೋರಾಡುವುದು ಅವಳ ಕೆಲಸ. ಇಪ್ಪತ್ತೊಂದು ದಿನಗಳ ತರಬೇತಿಯ ನಂತರ ಅವಳು ಸಾಥಿನ್ ಆದಳು. ಇದಕ್ಕೆ ಹಳ್ಳಿಯವರಿಂದ ಕೊನೆಗ ದೊರೆತ ಪ್ರತಿಫಲ 'ರಂಡೆ' ಎಂಬ ಬಿರುದು.

ಹೀಗಿರುವಾಗ 1992ರಲ್ಲಿ ರಾಜಾಸ್ಥಾನ್ ಸರ್ಕಾರವು ಬಾಲ್ಯವಿವಾಹವನ್ನು ಕಾನೂನು ವಿರೋಧಿ ಎಂದು ಕರೆದು ಅದನ್ನು ತಡೆಗಟ್ಟಲು ಮಹಿಳಾ ಸಂಘ ಗಳಿಗೆ ಕರೆಯಿತ್ತಿತು. ಅಕಾತೀಜ್ ಎಂಬ ಹಬ್ಬದ ದಿನವೇ ಬಾಲ್ಯ ವಿವಾಹಗಳು ನಡೆಯುತ್ತಿದ್ದುದರಿಂದ, ಅಂದು ನಡೆಯಲಿರುವ ವಿವಾಹಗಳ ಪಟ್ಟಿಮಾಡಿ ಕೊಡುವಂತೆ ಜಿಲ್ಲಾಧಿಕಾರಿ ಬಾನ್ವರಿಗೆ ತಿಳಿಸಿದರು. ರಾಮಕರಣ ಗುಜ್ಜಾರನ ಒಂದು ವರ್ಷದ ಮಗಳ ಮದುವೆ ಒಂದು, ಮತ್ತು ಬಾನ್ವರಿಯ ಮೈದುನನ ಮದುವೆಯೊಂದು–ಈ ಎರಡು ಮದುವೆಗಳು ಅಂದು ನಡೆಯಲಿದ್ದವು. ಗುಜ್ಜಾರ್ ಎಂಬುದು ರಾಜಸ್ಥಾನದ ಒಂದು ಪ್ರತಿಷ್ಠಿತ ಜಾತಿಯಾಗಿದ್ದು, ಕೇಂದ್ರ ಮಂತ್ರಿ ರಾಜೇಶ್ ಪೈಲಟ್ ಸ್ವತಃ ಗುಜ್ಜಾರರಾಗಿರುವುದರಿಂದ ಗುಜ್ಜಾರರ ವಿರುದ್ಧ ಹೋರಾಡುವುದು ಕಷ್ಟದ ಕೆಲಸ ವಾಗಿತ್ತು. ಮದುವೆಯನ್ನು ತಪ್ಪಿಸುವುದು ಬಾನ್ವರಿಯ ಕೈಲಿ ಇಲ್ಲದುದರಿಂದ ಅವಳು ಪೋಲೀಸರಿಗೆ ದೂರಿತ್ತಳು.

ಪೋಲೀಸರ ಮಧ್ಯಪ್ರವೇಶದಿಂದ ಮದುವೆಯೇನೋ ನಿಂತಿತು. ಆದರೆ ಕೆಲವೇ ದಿನಗಳ ನಂತರ ಗುಜ್ಜಾರರ ಮದುವೆ ನಡೆದು ಅದೇ ಪೋಲೀಸ್ ಅಧಿಕಾರಿಗಳು ಬಂದು ಉಂಡು ಹೋದರು. ಆಗ ತಾನು ತೊಡಗಿದ ಹೋರಾಟ ಎಷ್ಟು ಕಷ್ಟಕರ ಎಂದು ಬಾನ್ವರಿಗೆ ಅರಿವಾಯಿತು. ಸ್ವತಃ ಅವಳ ಮೈದುನನ ಮದುವೆಯೂ ಪೋಲೀಸರ ಪ್ರವೇಶದಿಂದ ನಿಂತಿತಾದ್ದರಿಂದ ಅವಳ ಅತ್ತೆ ಮಾವ ಅವಳೊಂದಿಗೆ ಮಾತು ನಿಲ್ಲಿಸಿದರು. ಮನೆಯ ಮಧ್ಯೆ ಒಂದು ಗೋಡೆಯೆಬ್ಬಿಸಿ ಅವಳಿಂದ ಬೇರೆಯಾಗಿ ಇರತೊಡಗಿದರು. ಇಡೀ ಹಳ್ಳಿ ಬಹಿಷ್ಕಾರ ಹಾಕಿತು.

1992 ಸೆಪ್ಟೆಂಬರ್ 22ರಂದು ಮಧ್ಯಾಹ್ನ ಹೊಲದಲ್ಲಿ ಗಂಡನೊಂದಿಗೆ ಕೆಲಸಮಾಡುತ್ತಿದ್ದ ಬಾನ್ವರಿ ದೇವಿಗೆ ಗಂಡನ ಕಿರುಚಾಟ ಕೇಳಿಸಿತು. ಓಡಿಹೋಗಿ ನೋಡಿದರೆ ಐದು ಮಂದಿ ಗುಜ್ಜಾರ ಜಾತಿಯವರು ಅವನಿಗೆ ಹೊಡೆಯುತ್ತಿದ್ದರು. ವಿಪರೀತ ರಕ್ತಸ್ರಾವದಿಂದ ಮೋಹನ್‌ಲಾಲ್ ಕೆಳಗೆ ಬೀಳುತ್ತಲೇ ಇವಳತ್ತ ತಿರುಗಿದ ಅವರು "ಅವನ ಸರದಿ ಮುಗಿಯಿತು ಈಗ ನಿನ್ನದು" ಅನ್ನುತ್ತ ಅವಳ ಗಂಡನ ಎದುರಿಗೇ ಅವಳ ಅತ್ಯಾಚಾರ ಮಾಡಿದರು. ಕುಂಟುತ್ತಾ ನರಳುತ್ತಾ ಮನೆಗೆ ಬಂದ ಗಂಡ ಹೆಂಡಿರು ಮಾರನೇ ಬೆಳಗ್ಗೆ ಪೋಲೀಸರಿಗೆ ದೂರು ಕೊಡುವುದೇ ಬೇಡವೇ ಎಂಬ ಸಂದಿಗ್ಧದಲ್ಲಿ ಸಿಕ್ಕಿದರು. ದೂರು ಕೊಟ್ಟರೆ ಗುಜ್ಜಾರರು ತಮ್ಮನ್ನು ಕೊಲ್ಲುವುದು ಖಂಡಿತಾ ಎಂಬುದು ಮೋಹನ್‌ಲಾಲನ ಅನಿಸಿಕೆಯಾದರೆ ಈಗ ಸುಮ್ಮನಿರುವುದು ಹೇಡಿತನ ಮತ್ತು 'ಸಾಥಿನ್' ಆಗಿ ತನ್ನ ಕರ್ತವ್ಯಲೋಪ ಎಂದು ಬಾನ್ವರಿಗೆ ಅನ್ನಿಸಿತು. ಹಳ್ಳಿಯ ಮುಖ್ಯಸ್ಥನಾದ ರಾಮೇಶ್ವರ ಪಂಡಾಗೆ ದೂರಿದಾಗ ತಾನು ಗುಟ್ಟಾಗಿ ಸಹಾಯ ಮಾಡುವುದಾಗಿ ತಿಳಿಸಿದ. ಕೃಷ್ಣಾ ಎಂಬ ಇನ್ನೊಬ್ಬ ಸಾಥಿಯೊಂದಿಗೆ W.D.P. ಕಛೇರಿಗೆ ಹೋದಾಗ, ರಸೀಲಾ ಎಂಬ ಅಧಿಕಾರಿ ಇವರನ್ನು ಡಾಕ್ಟರ ಬಳಿ ಕರೆದೊಯ್ದಳು. ಅವರು ಮೊದಲು ಪರೀಕ್ಷೆ ಮಾಡಲು ನಿರಾಕರಿಸಿ ನಂತರ 'ಇದು ಅತ್ಯಾಚಾರದ ಕೇಸು ಅಲ್ಲ' ಅಂದರು (ಪರೀಕ್ಷೆ ತಡವಾದಷ್ಟೂ ಅತ್ಯಾಚಾರದ ಕೇಸು ಪ್ರಮಾಣರಹಿತವಾಗುತ್ತದೆ). ಬಸ್ಸಿಯ ಪೋಲೀಸ್ ಠಾಣೆಯಲ್ಲಿ ಮನಸ್ಸಿಲ್ಲದೆ ದೂರು ದಾಖಲಾಯಿತು. "ಅತ್ಯಾಚಾರ ಎಂದರೆ ಏನೆಂದು ನಿನಗೆ ಗೊತ್ತೆ" ಎಂದು ಮತ್ತೆ ಮತ್ತೆ ಹೇಳುತ್ತಾ ಅವಳನ್ನು ಮಾನಸಿಕ ಹಿಂಸೆಗೆ ಒಳಪಡಿಸಲಾಯಿತು. ಕೇಸು ಮುಂದುವರೆದಂತೆಲ್ಲಾ, ಅತ್ಯಾಚಾರಕ್ಕೆ ಒಳಗಾಗುವುದಕ್ಕಿಂತಲೂ ಹೆಚ್ಚಿನ ಹಿಂಸೆಯೆಂದರೆ ಅದರ ಬಗ್ಗೆ ಮತ್ತೆ ಮತ್ತೆ ವಿವರ ನೀಡುವುದೇ ಎಂದು ಅವಳಿಗನ್ನಿಸಿತು. ಅವಳು ಧರಿಸಿದ್ದ ಗರಾರಾ (ಲಂಗ)ವನ್ನು ಪರೀಕ್ಷೆಗೆಂದು ಕೊಂಡೊಯ್ದ ಪೋಲೀಸರು ಅದನ್ನೂ ಹಿಂದಿರುಗಿಸಲಿಲ್ಲ, ಹಾಕಲು ಬೇರೊಂದು ಬಟ್ಟೆಯನ್ನೂ ಕೊಡಲಿಲ್ಲ. ಗಂಡನು ತಂದಿದ್ದ ಹೊದಿಕೆಯಿಂದ ಮೈ ಮುಚ್ಚಿ ಊರಿಗೆ ಹಿಂದಿರುಗಬೇಕಾಯಿತು.

1992 ಅಕ್ಟೋಬರ್ 22ರಂದು ಎರಡು ಸಾವಿರ ಸಾಥಿನ್‌ಗಳು ಹೊರಡಿಸಿದ ಮೆರವಣಿಗೆಯಿಂದಾಗಿ ಈ ಘಟನೆ ಪ್ರಚಾರ ಪಡೆದು ಪತ್ರಿಕೆಗಳಲ್ಲಿ ಪ್ರಕಟವಾಯಿತು. ಸಿ.ಬಿ.ಐ. ಕೋರಿಕೆಯಂತೆ ಬಾನ್ವರಿ ದೆಹಲಿಗೂ ಹೋದಳು. ಸಿ.ಬಿ.ಐ. ವರದಿ ಬಂದು ಜೈಪುರ ಹೈಕೋರ್ಟು ಇವಳ ಕೇಸನ್ನು ಎತ್ತಿ ಹಿಡಿಯಿತು. ಪ್ರಧಾನ ಮಂತ್ರಿಗಳ ಪರಿಹಾರ ನಿಧಿಯಿಂದ ಹತ್ತು ಸಾವಿರ ರೂ. ದೊರೆಯಿತು. ಎಲ್ಲಾ ಮುಗಿದು ಚಾರ್ಜ್ ಶೀಟ್ ಹಾಕುವಾಗ ಒಂದು ವರ್ಷವೇ ಕಳೆದಿತ್ತು. ಐದು ಮಂದಿ ಅಪರಾಧಿಗಳೂ ಸೆರೆಯಾದರು. ಕೆಲವೇ ದಿನಗಳಲ್ಲಿ ಜಾಮೀನಿನ ಮೇಲೆ ಹೊರ ಬಂದರು. ಇವಳ ಮನೆಗೂ ಬಂದು ತಮ್ಮ ಪೇಟಗಳನ್ನು ಕೆಳಗಿಟ್ಟು ಕ್ಷಮಿಸುವಂತೆ ಕೋರಿದರು. ಆದರೆ ಬಾನ್ವರಿ ಕ್ಷಮಿಸಲು ತಯಾರಿರಲಿಲ್ಲ. ಇದೀಗ ಅಪರಾಧಿಗಳನ್ನು ಜಿಲ್ಲಾ ನ್ಯಾಯಾಲಯ ಆರೋಪಿಗಳೆಲ್ಲರೂ ವಯಸ್ಸಾದವರಾದುದರಿಂದ ಅತ್ಯಾಚಾರ, (ಬಲಾತ್ಕಾರ)ದಂತಹ ಕೆಲಸ ಮಾಡಲು ದೈಹಿಕವಾಗಿ ದುರ್ಬಲರೆಂದೂ, ಅವಳ ಗರಾರಾದ ಮೇಲಿನ ವೀರ್ಯವು ಅಪರಾಧಿಗಳದಲ್ಲವೆಂದೂ ಆದ್ದರಿಂದ ಅತ್ಯಾಚಾರ ನಡೆಯಿತೆಂದು ಸಾಬೀತಾಗುವುದಿಲ್ಲವೆಂದೂ ತೀರ್ಪಿತ್ತು ಅಪರಾಧಿಗಳನ್ನು ಬಿಡುಗಡೆ ಮಾಡಿದೆ.

1994ರ ನೀರಜ್ ಬನೋಟ್ ಪ್ರಶಸ್ತಿ ಬಾನ್ವರಿಗೆ ದೊರೆಯಿತು. ಬೊಂಬಾಯಿಗೆ ವಿಮಾನದಲ್ಲಿ ಹೋಗಿ ಚುನಾವಣಾಧಿಕಾರಿ ಶೇಷನ್‌ರವರಿಂದ ಪ್ರಶಸ್ತಿ ಪಡೆದ ಬಾನ್ವರಿಗೆ ಆತ್ಮವಿಶ್ವಾಸ ಬಂತು. ಈ ಪ್ರಶಸ್ತಿಯ ಮೊತ್ತವಾದ ಒಂದು ಲಕ್ಷ ರೂ. ಗಳನ್ನು ತನ್ನ ಕುಟುಂಬಕ್ಕೆ ಖರ್ಚು ಮಾಡದೇ ಮಹಿಳೆಯರ ಅಭಿವೃದ್ಧಿಗಾಗಿಯೇ ಮೀಸಲಿಡಬೇಕೆಂಬುದು ಅವಳ ಹಂಬಲ.

## ಬಾನ್ವರಿ ವಿರುದ್ಧ ನಡೆದ ರ್‍ಯಾಲಿ

ಬಾನ್ವರಿದೇವಿ ಅತ್ಯಾಚಾರಕ್ಕೆ ಸಂಬಂಧಿಸಿದಂತೆ, ಇತ್ತೀಚೆಗೆ ಜಿಲ್ಲಾ ನ್ಯಾಯಾಲಯವು ತೀರ್ಪು ನೀಡಿದೆ. ಸರಿಯಾದ ಸಾಕ್ಷಿ ಪುರಾವೆಗಳು ಇಲ್ಲದ ಕಾರಣ, ಆರೋಪ ಸಾಬೀತಾಗಿಲ್ಲವೆಂದು ನ್ಯಾಯಾಲಯ ಹೇಳಿದೆ. ಅಲ್ಲದೆ ಆರೋಪ ಹೊತ್ತ ವ್ಯಕ್ತಿಗಳು 'ಹಿರಿಯ' ಹಾಗು ಗೌರವಾನ್ವಿತ ವ್ಯಕ್ತಿಗಳಾಗಿರುವುದರಿಂದ ಅವರನ್ನು ಬಿಡುಗಡೆ ಮಾಡಬೇಕೆಂದು ನ್ಯಾಯಾಲಯವು ತೀರ್ಪು ನೀಡಿದೆ. ಆರೋಪಿಗಳ ಬಿಡುಗಡೆಯ ನಂತರ ನಡೆದ ರ್‍ಯಾಲಿ-ಮಹಿಳಾ ಸಂಘಟನೆಗಳು ಗಂಭೀರವಾಗಿ ಚಿಂತಿಸುವಂತೆ ಮಾಡಿದೆ. ಪಿತೃಪ್ರಾದಾನ್ಯತೆಯು ಪಡೆದುಕೊಳ್ಳುತ್ತಿರುವ ಕ್ರೂರ, ಅಸಹ್ಯವನ್ನು ಎದುರಿಸಲು, ಮಹಿಳಾ ಸಂಘಟನೆಗಳು ಹೆಚ್ಚು ಬಲಗೊಳ್ಳಬೇಕಾಗಿದೆ. ಅಧಿಕಾರ ಪಡೆದುಕೊಳ್ಳುವ ಸಲುವಾಗಿ ಮಹಿಳಾ ಪ್ರಶ್ನೆಯನ್ನು ತಮ್ಮ ಹಿತಕ್ಕೆ ತಕ್ಕಂತೆ ಉಪಯೋಗಿಸಿಕೊಳ್ಳುವುದನ್ನು ನಾವು ಖಂಡಿಸಬೇಕು.

ಆರೋಪಿಗಳ ಬಿಡುಗಡೆಯ ನಂತರ ನಡೆದ ರ್‍ಯಾಲಿಯನ್ನು ಬಸ್ಸಿ ಗ್ರಾಮದ ಶಾಸಕ ಕನ್ಹಯ್ಯ ಲಾಲ್‌ಮೀನ, ಬಿ.ಜೆ.ಪಿ. ಮಹಿಳಾ ಮೋರ್ಚ, ಗ್ರಾಮೀಣ ಮಹಿಳಾ ಸಂಘರ್ಷ ಸಮಿತಿಯವರು, ಬಸ್ಸಿ ವಿಭಾಗದ ಪಂಚಾಯ್ತಿರಾಜ್‌ನ ಪ್ರತಿನಿಧಿಗಳು ಸಂಘಟಿಸಿದ್ದರು. ಪೋಲೀಸರ ಪ್ರಕಾರ ಸುಮಾರು 7000 ಜನ ಸೇರಿದ್ದರು. ನ್ಯಾಯಲಯ ನೀಡಿದ ತೀರ್ಪನ್ನು ಬೆಂಬಲಿಸಲು ಹಾಗೂ, ಬಾನ್ವರಿದೇವಿಯು ಹೈಕೋರ್ಟ್‌ಗೆ ಅಪೀಲ್ ಹೋಗಲು ಅನುಮತಿ ನೀಡಿದ ರಾಜ್ಯ ಸರ್ಕಾರದ ನಿಲುವನ್ನು ಖಂಡಿಸುವುದೇ ರ್‍ಯಾಲಿಯ ಉದ್ದೇಶವೆಂದು ತಿಳಿಸಿದ್ದರೂ ಅದು ಬೇರೆಯೆ ಎಂದು ರ್‍ಯಾಲಿಯಲ್ಲಿ ಪ್ರತ್ಯಕ್ಷ ಕಂಡವರು ವರದಿ ಮಾಡಿದ್ದಾರೆ. ಬಾನ್ವರಿದೇವಿ ಹಾಗೂ ಅವಳನ್ನು ಬೆಂಬಲಿಸಿದ ಮಹಿಳಾ ಸಂಘಟನೆಗಳನ್ನು ಹತ್ತಿಕ್ಕುವುದೇ ರ್‍ಯಾಲಿಯ ಗುರಿಯಾಗಿತ್ತು ಎನ್ನುವುದು ನಿಚ್ಚಳ. ಅಲ್ಲಿ ಮಾತನಾಡಿದ ನಾಯಕ, ನಾಯಕಿಯ ಮಾತುಗಳಿಂದ ಇದು ಸ್ಪಷ್ಟವಾಗುತ್ತದೆ.

ಅಲ್ಲಿ ಸೇರಿದ್ದ ಪುರುಷ ಸರಪಂಚರು, ಎಂ.ಎಲ್.ಎಗಳ ಪ್ರಕಾರ ಮಹಿಳಾ ಸಂಘಟನೆಗಳು ಸರ್ಕಾರದ ಮೇಲೆ ಒತ್ತಡ ತಂದು ಕೇಸನ್ನು ಸಿ.ಬಿ.ಐನವರು ತೆಗೆದುಕೊಳ್ಳುವಂತೆ ಹಾಗು ಹೈಕೋರ್ಟ್‌ಗೆ ಅಪೀಲ್ ಹೋಗುವ ಅನುಮತಿ ಪಡೆದಿದ್ದಾರೆ. ಇದೇ ರೀತಿ ಅವರ ಒತ್ತಡಕ್ಕೆ ಸರ್ಕಾರ ಮಣಿಯುತ್ತ ಬಂದರೆ ಪಂಚಾಯ್ತಿಯವರೆಲ್ಲರೂ ಒಟ್ಟಿಗೆ ರಾಜೀನಾಮೆ ನೀಡುವುದಾಗಿ ಅವರುಗಳು ಘೋಷಿಸಿದ್ದಾರೆ.

ಬಾನ್ವರಿದೇವಿ ಪಡೆದ ಒಂದು ಲಕ್ಷ ರೂ. ನೀರ್‌ಜ್ ಬನೋಟ್ ಪ್ರಶಸ್ತಿಯನ್ನು ಹಿಂತಿರುಗಿಸಬೇಕು. ಆಕೆ ಪ್ರಶಸ್ತಿಯನ್ನು ಶೇಷನ್ ಅವರ ಕೈಯಿಂದ ಪಡೆದು ಅವರ ಹೆಸರನ್ನು ಅಪವಿತ್ರಗೊಳಿಸಿದ್ದಾರೆ. ಜಸ್ಟೀಸ್ ಕೃಷ್ಣ ಅಯ್ಯರ್ ಅವರು ಆಕೆಗೆ ಬೆಂಬಲ ಸೂಚಿಸುವ ಮೂಲಕ ಇಡೀ ನ್ಯಾಯಂಗವನ್ನೇ ಅಪಮಾನಗೊಳಿಸಿದ್ದಾರೆ. ಮಹಿಳಾ ಸಂಘಟನೆಗಳು ಸೆಷನ್‌ಕೋರ್ಟ್ ಜಡ್ಜ್ ಜಗ್‌ಪಾಲ್‌ಸಿಂಗ್ ಅವರನ್ನು ಬೆದರಿಸಿದ್ದಾರೆ. ಅವರುಗಳು ಬಾನ್ವರಿದೇವಿಗೆ 250-00 ರೂ.ನ ಆಮಿಷ ಒಡ್ಡಿ, ಇನ್ನೂ ಹೆಚ್ಚಿನ ಹಣ ಹಾಗು ಪ್ರಶಸ್ತಿಯನ್ನು ಕೊಡಿಸುವುದಾಗಿ ಬಡ ಬಾನ್ವರಿಗೆ ಹೇಳಿ, ಅವಳಿಂದ ಅತ್ಯಾಚಾರವಾಯಿತೆಂದು ಹೇಳಿಸಿದ್ದಾರೆ. ಬಾನ್ವರಿಗೆ ಬೆಂಬಲ ನೀಡಿ ಮಹಿಳಾ ಸಂಘಟನೆಗಳು ಯಾವ ಉಪಯುಕ್ತವಾದ ಅಥವಾ ಪವಿತ್ರವಾದ ಕೆಲಸವನ್ನು ಮಾಡಿಲ್ಲ. ಸತ್ಯವನ್ನು ಜೈಪುರದ ಜನತೆಯ ಮುಂದಿಡುವ ಸಲುವಾಗಿ ಈ ರ್‍ಯಾಲಿಯನ್ನು ಅವರು ಕರೆದಿರುವುದಾಗಿ ಹೇಳಿದರು. ಮಾತನಾಡಿದ ನಂತರ ಆರೋಪಿಗಳನ್ನು ಗೌರವಿಸಲಾಯಿತು. ಇವರುಗಳು ಗೌರವಾನ್ವಿತ ವ್ಯಕ್ತಿಗಳು. ಇವರು ಅತ್ಯಾಚಾರ ಮಾಡಲು ಸಾಧ್ಯವೇ ಎಂದು ಕೇಳಲಾಯಿತು. ಕೊನೆಯಲ್ಲಿ "ಬಾನ್ವರಿದೇವಿ ಸುಳ್ಳಿ, ನೀ ಬೀಜಿಂಗ್‌ಗೆ ಹೋದರೆ, ಸುಳ್ಳನ್ನು ಸತ್ಯವನ್ನಾಗಿಸಲು ಸಾಧ್ಯವಿಲ್ಲ" ಎಂಬ ಘೋಷಣೆ ಕೂಗಲಾಯಿತು.

ಈ ರ್‍ಯಾಲಿಯಾದ ಬಳಿಕ, ಬಸ್ಸಿ ವಿಭಾಗಕ್ಕೆ ಮಹಿಳಾ ಸಂಘಟನೆಯ ಪ್ರತಿನಿಧಿಯೊಬ್ಬರು ಹೋದಾಗ ಬೆಳಕಿಗೆ ಬಂದ ವಿಷಯವೇನೆಂದರೆ ರ್‍ಯಾಲಿಗೆ ಮುನ್ನ ಶಾಸಕ, ಸಾರ್ವಜನಿಕ ಸಭೆ ಕರೆದು ಪ್ರತಿಯೊಂದು ಮನೆಯಿಂದ 50ರೂ. ಹಾಗು ಮನೆಗೆರೆಡು ವ್ಯಕ್ತಿಗಳನ್ನು ಕಳಿಸಬೇಕೆಂದು ಗಂಗೆ ಹಾಗು ಗೋವಿನ ಮೇಲೆ ಆಣೆ ಮಾಡಿಸಿಕೊಂಡರು. ತಪ್ಪಿದರೆ ಜಾತಿಯಿಂದ, ಹಳ್ಳಿಯಿಂದ ಬಹಿಷ್ಕರಿಸುವುದಾಗಿ ಬೆದರಿಸಿದ್ದಾರೆ. ಕೆಲವರು ಭಯದಿಂದ ಹಣ ನೀಡಿದ್ದರೂ, ಬಾನ್ವರಿಗೆ

ಬೆಂಬಲಿತವಾಗಿ ರ‍್ಯಾಲಿಗೆ ಹೋಗಿಲ್ಲ. ಕೆಲವು ಮಹಿಳೆಯರು ಗಂಡಂದಿರ ಒತ್ತಡದಿಂದಾಗಿ ರ‍್ಯಾಲಿಗೆ ಹೋಗಿದ್ದಾರೆ.

ರ‍್ಯಾಲಿ ಮೂಲಕ ಸಿಕ್ಕ ಸಂದೇಶ ತುಂಬಾ ಸ್ಪಷ್ಟ ವಾಗಿದೆ. ಅದೇನೆಂದರೆ–ಎಲ್ಲ ರಾಜಕೀಯ ಪಕ್ಷಗಳಿಗೂ, ಹಳ್ಳಿಯ ಮಹಿಳೆಯರು ಕೂಡ ಎದ್ದು ನಿಂತು ಹೋರಾಡಬಲ್ಲರು ಎಂಬ ಅಂಶ ಭಯ ಹುಟ್ಟಿಸಿದೆ. ಎಂದು ಅಲ್ಲಿ ಮಹಿಳೆಯರೊಬ್ಬರು ಹೇಳಿದ್ದಾರೆ. ಮಹಿಳೆಯರ ಹೋರಾಟ ಕೇವಲ ದೆಹಲಿ, ಜೈಪುರಕಷ್ಟೆ ಸೀಮಿತವಲ್ಲ, ಹಳ್ಳಿಯ ಹೆಂಗಸರೂ ಹೋರಾಡಬಲ್ಲರು. ಮಹಿಳೆಯರ ಈ ಬಲವನ್ನು ಹತ್ತಿಕ್ಕುವ ಪ್ರಯತ್ನವೆ ಈ ರ‍್ಯಾಲಿಯ ಉದ್ದೇಶ. ಮಹಿಳೆಯರ ಸಂಘಟಿತ ಹೋರಾಟ ಅವರಿಗೆ ಭೀತಿಯನ್ನು ಹುಟ್ಟಿಸಿದೆ. ಮಹಿಳಾ ಸಂಘಟನೆಗಳ ಜೊತೆಗೂಡಿದರೆ ಬಾನ್ವರಿ ದೇವಿಗಾದ ಗತಿಯೇ ನಿಮಗೂ ಆಗುವುದೆಂದು ಬೆದರಿ ಸಿರುವುದನ್ನು ನೋಡಿದರೆ ಅವರು ಭೀತಿಗೊಂಡಿರು ವುದು ಸ್ಪಷ್ಟವಾಗುತ್ತದ.

**ಅತ್ಯಾಚಾರ ಒಂದು ಅಂತಿಮ ಅಸ್ತ್ರ**

ಸ್ತ್ರೀಯರ ಮೇಲೆ ನಡೆಯುವ ಲೈಂಗಿಕ ಅತ್ಯಾಚಾರ ಪುರುಷ ಪ್ರಧಾನ ಮೌಲ್ಯಗಳ ಪ್ರಭುತ್ವದ, ಅಧಿಕಾರದ ಸಂಕೇತವಾಗಿದೆ. ಇದು ಸ್ತ್ರೀಯರ ಮೇಲೆ ಅಂತಿಮ ವಾಗಿ ಪ್ರಯೋಗಿಸಬಹುದಾದ ಅಸ್ತ್ರ. ಬನ್ವಾರಿ ದೇವಿಯ ಮೇಲೆ ನಡೆದ ಈ ಅಮಾನುಷ ಹಿಂಸೆ ನಮ್ಮ ಸಮಾಜದಲ್ಲಿ ಬೇರುಬಿಟ್ಟ ಕ್ರೂರತನಕ್ಕೆ ಹಿಡಿದ ಕನ್ನಡಿ ಯಾಗಿದೆ.

ಬಾನ್ವರಿದೇವಿಯ ಹೋರಾಟದ ಮನೋಭಾವನೆ ಯನ್ನು ಹತ್ತಿಕ್ಕಲು ಅಲ್ಲಿನ ಪ್ರತಿಷ್ಠಿತ, ಹಾಗೂ ಪ್ರಬಲ ಕೋಮು ಬಳಸಿದ ಅಸ್ತ್ರ ಅತ್ಯಾಚಾರ ಈ ಒಂದು ಅಸ್ತ್ರದಿಂದ ಮಾತ್ರ ಅವಳನ್ನು ಸಂಪೂರ್ಣವಾಗಿ ಹತ್ತಿಕ್ಕ ಬಹುದೆಂದು ಈ ಕೋಮಿಗೆ ಸೇರಿದ ಆರೋಪಿಗಳು ಭಾವಿಸಿದ್ದರು. ಬಿ.ಜೆ.ಪಿ. ಬೆಂಬಲಿತ ಈ ಪ್ರಭ್ರ ಕೋಮು ಇಂದು ಬಾನ್ವರಿದೇವಿಯ ಮೇಲೆ ನಡೆದ ಅತ್ಯಾಚಾರವನ್ನು ತನ್ನ ನೈತಿಕತೆಯ ಸಂಕೇತವನ್ನಾಗಿ ಮಾಡಿಕೊಂಡು ಆರೋಪಿಗಳಿಗೆ ನೀಡಬಹುದಾದ ಸಂಪೂರ್ಣ ರಕ್ಷಣೆಯನ್ನು ನೀಡುತ್ತಿದೆ. ಇದು ಕೇವಲ ರಕ್ಷಣೆಯಾಗಿದ್ದರೆ ಬೇರೆ ಮಾತು. ಇಂದು ಇದು ಆರೋಪಿಗಳನ್ನು ಸನ್ಮಾನಿಸುವ ಹಂತವನ್ನು ತಲುಪಿದ್ದು, ಬಿ.ಜೆ.ಪಿ. ಸ್ತ್ರೀಯರ ಬಗ್ಗೆ ಹೊಂದಿರುವ ಮೂಲಭೂತ ಧೋರಣೆ, ಹಾಗೂ ನಿಲುವನ್ನು ಪ್ರಶ್ನಿಸುವಂತಾಗಿದೆ. ಮನು ಪರಂಪರೆಯ ಹಿನ್ನಲೆಯಲ್ಲಿ ಸ್ತ್ರೀಯರನ್ನು ತಾಯಿಯಾಗಿ ಇಲ್ಲವೆ ಸೂಳೆಯಾಗಿ ಮಾತ್ರ ನೋಡ ಲಾಗುತ್ತದೆ. ಅನುಕೂಲಕರ ಸನ್ನಿವೇಶದಲ್ಲಿ ತಾಯಿಯಾಗಿ ಕಾಣುವ ಕಣ್ಣು ಇನ್ನುಳಿದಂತೆ ಆಕೆಯನ್ನು ಒಂದು ಭೋಗದ ವಸ್ತುವನ್ನಾಗಿ ಪರಿಗಣಿಸಲಾಗುತ್ತದೆ. ಇಂತಹ ಅತಿರೇಕದ ಸಾಂಸ್ಕೃತಿಕ ವಾತಾವರಣದಲ್ಲಿ ಮಾತ್ರ ಸ್ತ್ರೀಯರನ್ನು ಹೀಗೆ ಅಮಾನುಷವಾಗಿ, ವಿಕೃತ ರೀತಿಯಲ್ಲಿ ಹಿಂಸಿಸಲು ಸಾಧ್ಯ.

ಇದು ಬಿ.ಜೆ.ಪಿ ಬೆಂಬಲಿತ ಆರೋಪಿಗಳಿಗೆ, ಹಾಗೂ ಗುಜ್ಜಾರ್ ಜನಾಂಗಕ್ಕೆ ಪ್ರತಿಷ್ಠೆಯ, ನೈತಿಕತೆಯ ಸಂಕೇತವಾಗಿರುವುದನ್ನು ಮಾನವೀಯ ಮೌಲ್ಯಗಳಲ್ಲಿ ನಂಬಿಕೆಯನ್ನು ಹೊಂದಿರುವರೆಲ್ಲರೂ ಯೋಚಿಸಬೇಕಾದ ಸಂಗತಿಯಾಗಿದೆ. ಒಂದು ಮೇಲು ಜಾತಿಯ ಪುರುಷರು ಇನ್ನೊಂದು ದುರ್ಬಲ ವರ್ಗದ ಪುರುಷರ ಮೇಲೆ ತೀರಿಸಿಕೊಳ್ಳುವ ಸೇಡಿನ ಕ್ರಿಯೆ ಯೆಂದು ಭಾವಿಸಲಾಗಿದೆ. ಬಾನ್ವರಿದೇವಿ ಬಾಲ್ಯ ವಿವಾಹವನ್ನು ತಡೆಯಲು ನಡೆಸಿದ ಪ್ರಯತ್ನ ಕೇವಲ ಒಂದು ನೆಪವಾಗಿತ್ತೆ ಎನ್ನುವಷ್ಟು ಸಂಕೀರ್ಣತೆಯ ಸ್ವರೂಪವನ್ನು ಈ ಘಟನೆ ಪಡೆಯುತ್ತಿದೆ. ಒಂದು ಜನಾಂಗ ತನಗಾಗದ ಇನ್ನೊಂದು ಜನಾಂಗದ ಮೇಲೆ ಸೇಡು ತೀರಿಸಿಕೊಳ್ಳಲು ಒಂದು ಜನಾಂಗ ಸ್ತ್ರೀಯರ ಮೇಲೆ ನಡೆಸುವ ಅತ್ಯಾಚಾರಕ್ಕೆ ವಿಪುಲ ನಿದರ್ಶನಗಳನ್ನು ನೀಡಬಹುದಾಗಿದೆ. ಕೋಲಾರದ ಜಿಲ್ಲೆಯಲ್ಲಿ ಭೂಮಿ ಜಗಳದಲ್ಲಿ ಪ್ರಾರಂಭವಾದ ವೈಮನಸ್ಸು ದಲಿತ ಮಹಿಳೆ ಅನಸೂಯಮ್ಮನ ಮೇಲೆ ಅತ್ಯಾಚಾರ ವೆಸಗುವುದರ ಮೂಲಕ ದಲಿತ ವರ್ಗದ ಪುರುಷರನ್ನು ಅವಮಾನ ಮಾಡಲು ಪ್ರಯತ್ನಿಸಲಾಯಿತು. ವೈಯಕ್ತಿಕ ವಾದ ಆಸ್ತಿಯ ವೈಮನಸ್ಸು ಒಂದು ಹಂತದ ನಂತರ ಒಂದು ಜನಾಂಗದ ನೈತಿಕತೆಯ ಸಂಕೇತವನ್ನಾಗಿ ಮಾಡಿಕೊಂಡು, ಇನ್ನೊಂದು ಜನಾಂಗವನ್ನು ಶಿಕ್ಷಿಸ ಲಾಗುತ್ತಿದೆ. ಈ ಶಿಕ್ಷೆಯು, ಅವಮಾನದ ಅಸ್ತ್ರ, ಲೈಂಗಿಕ ಅತ್ಯಾಚಾರ. 1978ರಲ್ಲಿ ಕರೀಂ ನಗರದ ಕುದಲ್‌ಪಾಕ್ ಹಳ್ಳಿಯಲ್ಲಿ ನಡೆದ ಜಮೀನ್‌ದಾರಿ ಪದ್ಧತಿಯ ವಿರುದ್ಧ ಸಂಘಟಿತರಾದ ಮಹಿಳೆಯರು

ರೈತ ಮಹಿಳಾ ಸಂಘವನ್ನು ಸ್ಥಾಪಿಸಿಕೊಂಡು ಹೋರಾಟ ಕೈಗೊಳ್ಳಿದರು. ಈ ಸಂಘಟನೆಯನ್ನು ಹತ್ತಿಕ್ಕಲು ಸಂಘದ ನಾಯಕಿಯಾದ 50 ವರ್ಷ ವಯಸ್ಸಿನ ರಾಜಮ್ಮ ಎಂಬಾಕೆಯ ಮೇಲೆ ಅತ್ಯಾಚಾರವೆಸಗಲಾಯಿತು. ಈ ಮಹಿಳೆಯರನ್ನು ಹತ್ತಿಕ್ಕಲು ಜಮೀನುದಾರರಿಗಿದ್ದ ಒಂದೇ ಅಸ್ತ್ರ, ಹಾಗೂ ಕಡೆಯ ಅಸ್ತ್ರವೆಂದರೆ ಅತ್ಯಾಚಾರ. ಇನ್ನಾವ ರೀತಿಯಿಂದ ಈ ಮಹಿಳೆಯರ ಸಂಘಟಿತ ಮಹಿಳೆಯರ ದ್ವನಿಯನ್ನು ಹತ್ತಿಕ್ಕಲಾಗದ ಜಮೀನುದಾರನಿಗೆ ಅಧಿಕಾರ ಶಾಹಿಯ, ಪೋಲೀಸ್, ಹಾಗೂ ರಾಜಕೀಯ ಕುಮ್ಮಕ್ಕು ಹಾಗೂ ಬೆಂಬಲವಿತ್ತು. ಕೋಮು ಗಲಾಟೆಗಳ, ಭಾಷೆ, ಇನ್ನಿತರ ಸಮಸ್ಯೆಗಳ ಸಂದರ್ಭದಲ್ಲಿ ಸ್ತ್ರೀಯರ ಮೇಲೆ ಅತ್ಯಾಚಾರವೆಸಗುವುದನ್ನು ನಾವು ಕಾಣಬಹುದಾಗಿದೆ.

ಬಾನ್ವರಿದೇವಿಯ ಹೋರಾಟವನ್ನು ಹತ್ತಿಕ್ಕಲು ಬಿ.ಜೆ.ಪಿ. ಬಳಸುತ್ತಿರುವ ತಂತ್ರಗಳು ಇಂದು ನಿಚ್ಚಳವಾಗಿ ನಮ್ಮ ಮುಂದಿವೆ. ಚುನಾವಣೆಗಳು ಹತ್ತಿರ ಬರುತ್ತಿರುವ ಹಿನ್ನಲೆಯಲ್ಲಿ ಈ ಘಟನೆಯನ್ನು ಒಂದು ಜನಾಂಗದ ಮತಗಳನ್ನು ಪಡೆಯುವ ಉದ್ದೇಶದಿಂದ ಬಳಸಿಕೊಳ್ಳುತ್ತಿರುವುದು ತುಂಬಾ ಸ್ಪಷ್ಟವಾಗಿದೆ. ಓಟಿನ ರಾಜಕೀಯಕ್ಕಾಗಿ ರಾಜಕೀಯ ಪಕ್ಷಗಳು ತುಳಿಯುತ್ತಿರುವ ಕ್ಷುಲ್ಲಕ ಮಾರ್ಗವನ್ನು ಇದು ತೋರಿಸುತ್ತದೆ. ರಾಜಸ್ಥಾನದಲ್ಲಿ ಬಿ.ಜೆ.ಪಿ. ಸರ್ಕಾರವಿರುವುದರಿಂದ, ಅಧಿಕಾರಶಾಹಿಯ, ಪೋಲೀಸರ ಬೆಂಬಲ ದೊರೆಯುತ್ತಿರುವುದು ಸುಲಭಗ್ರಾಹಿಯಾದ ಸಂಗತಿಯಾಗಿದೆ. ಮಹಿಳೆಯರನ್ನು ಮಹಿಳೆಯರ ವಿರುದ್ಧ ಎತ್ತಿಕಟ್ಟಲಾಗುತ್ತಿದೆ. ಅಧಿಕಾರ ವಿಕೇಂದ್ರಿಕರಣದ ಪ್ರಕ್ರಿಯೆಯಲ್ಲಿ ಭಾಗಿಯಾಗಿರುವ ಪಂಚಾಯ್ತಿ ಸದಸ್ಯರಾದ ಸ್ತ್ರೀಯರು ಇಂದು ಬಾನ್ವರಿದೇವಿಯ ವಿರುದ್ಧ ಹೋರಾಡಲು ರಸ್ತೆಗಿಳಿದಿದ್ದಾರೆ. ಪುರುಷರ ರಾಜಕೀಯ ಉದ್ದೇಶದ ಕೈಗೊಂಬೆಯಾಗಿರುವ ಈ ಮಹಿಳೆಯರು ತಮ್ಮ ಮೇಲೂ ಇಂತಹ ಹಿಂಸೆ ನಡೆಯಬಹುದೆನ್ನುವುದನ್ನೂ ಮರೆತುಬಿಟ್ಟಿದ್ದಾರೆ. ಇವರು ಪಡೆದ ರಾಜಕೀಯ ಅಧಿಕಾರವನ್ನು ಯಾವ ಉದ್ದೇಶಗಳಿಗಾಗಿ ಬಳಸಿಕೊಳ್ಳುತ್ತಿದ್ದಾರೆ ಎಂಬ ಅಂಶವನ್ನೂ ಗಮನಿಸಿದರೆ ಚುನಾಯಿತ ಸ್ತ್ರೀಯರ ರಾಜಕೀಯ ದೃಷ್ಟಿಯೇನು? ಅವರು ಗಂಡಸರಿಗಿಂತ ಹೇಗೆ ಭಿನ್ನವಾಗಬಲ್ಲರು ? ಎಂಬ ಅನುಮಾನ ಕಾಡುತ್ತದೆ.

1978ರಲ್ಲಿ ರಾಜಮ್ಮ ಪೋಲೀಸ್ ಸ್ಟೇಷನ್‌ಗೆ ತನ್ನ ಮೇಲೆ ನಡೆದ ಅತ್ಯಾಚಾರದ ದೂರನ್ನು ನೀಡಲು ಹೋದಾಗ ಸಂಬಂಧಪಟ್ಟ ಅಧಿಕಾರಿ "ರೇಪ್ ಅಂದ್ರೆ ಏನು ಅಂತ ನಿನಗೆ ಗೊತ್ತಾ" ಎಂದು ಕೇಳಿದ್ದ. ಇದೇ ಪ್ರಶ್ನೆಯನ್ನು ಬಾನ್ವರಿದೇವಿಯು ಎದುರಿಸಬೇಕಾದದ್ದು ಸ್ತ್ರೀಯರ ಬಗೆಗಿರುವ ಪೂರ್ವಾಗ್ರಹ ಪೀಡಿತ ಧೋರಣೆಯನ್ನು ತೋರಿಸುತ್ತದೆ. ಬಾನ್ವರಿದೇವಿ ಪೋಲೀಸ್ ಸ್ಟೇಷನ್‌ಗೆ ದೂರು ನೀಡಲು ಹೋದಾಗ, ದೂರು ತೆಗೆದುಕೊಳ್ಳಲು ನಿರಾಕರಿಸಿದ ಅಧಿಕಾರಿ "ರೇಪ್ ಅಂದ್ರೆ ಏನು ಅಂತ ನಿನಗೆ ಗೊತ್ತಾ ?" ಎಂದು ಕೇಳಿದ್ದ. ಅತ್ಯಾಚಾರಕ್ಕೆ ಒಳಗಾದ ಸ್ತ್ರೀಯರು ನ್ಯಾಯಕ್ಕಾಗಿ ನ್ಯಾಯಾಲಯದ ಮೊರೆ ಹೋದಾಗ ಎದುರಿಸಿದ ಎಲ್ಲಾ ಪ್ರಶ್ನೆಗಳನ್ನು ಸಮಸ್ಯೆಗಳನ್ನು ಬಾನ್ವರಿದೇವಿ ಎದುರಿಸಿದ್ದಾಳೆ. ಸ್ತ್ರೀ ಸಂಘಟನೆಗಳ ಒತ್ತಾಯದ ಫಲವಾಗಿ ಕೇಸನ್ನು ದಾಖಲು ಮಾಡಲಾಯಿತಾದರೂ ಸೆಷನ್ ಕೋರ್ಟ್ ಅಪರಾಧಿಗಳನ್ನು ಆರೋಪದಿಂದ ಮುಕ್ತಗೊಳಿಸಲಾಗಿದೆ. ಆರೋಪಿಗಳು ಗೌರವಾನ್ವಿತ, ವಯಸ್ಸಾದ ಪುರುಷರಾದ ಕಾರಣ ಅವರು ಅತ್ಯಾಚಾರವೆಸಗಲು ಸಾಧ್ಯವಿಲ್ಲ ಎಂಬ ಕಾರಣ ನೀಡಲಾಗಿದೆ. ಸಾಕ್ಷಿ ಸಂಘಟನೆಯು ಬಾನ್ವರಿದೇವಿಗೆ ನ್ಯಾಯ ದೊರಕಿಸಿ ಕೊಡುವಲ್ಲಿ ಹಾಗೂ ಲೈಂಗಿಕ ಅತ್ಯಾಚಾರದ ಕಾನೂನಿನಲ್ಲಿ ಬದಲಾವಣೆಯನ್ನು ತರುವುದಕ್ಕಾಗಿ ಸಂಘಟನಾತ್ಮಕವಾಗಿ ನಡೆಯುತ್ತಿರುವ ಹೋರಾಟದ ಹಿನ್ನಲೆಯಲ್ಲಿ ಆ ಸಂಘಟನೆಯ ಜೆಸ್‌ಜಿತ್‌ಪುರೇವಾಲ್ ಕಾನೂನಿನ ಮಿತಿಗಳನ್ನೂ ಹಾಗೂ ನ್ಯಾಯ ನೀಡುವಲ್ಲಿ ಕೆಲಸ ಮಾಡುವ ಪುರುಷ ಪ್ರಧಾನ ಮೌಲ್ಯಗಳನ್ನು ವಿಮರ್ಶಾತ್ಮಕವಾಗಿ ಚರ್ಚಿಸಿದ್ದಾರೆ. ಅತ್ಯಾಚಾರಕ್ಕೊಳಗಾದ ಮಹಿಳೆ 52 ಗಂಟೆಗಳ ಒಳಗೆ ವೈದ್ಯಕೀಯ ಪರೀಕ್ಷೆಗೆ ಒಳಗಾಗಬೇಕೆನ್ನುವುದು ಪ್ರಾಥಮಿಕ ಸಾಕ್ಷಿಯಾಗುತ್ತದೆ. ಆದರೆ ಕಾನೂನಿನ ಅರಿವಿಲ್ಲದ ಮಹಿಳೆಯರು ಸ್ನಾನ ಮಾಡುವುದು ಅಥವಾ ಬಟ್ಟೆ ಬದಲಾಯಿಸುವುದರ ಮೂಲಕ, ಪ್ರಮುಖವಾದ ಸಾಕ್ಷಿ ನಾಶವಾಗುತ್ತದೆ. ಬಾನ್ವರಿದೇವಿಗೆ ಮಹಿಳಾ ಸಂಘಟನೆಗಳ ಪರಿಚಯದಿಂದಾಗಿ ಈ ಮಾಹಿತಿ ತಿಳಿದಿದ್ದರೂ ಆಕೆ ವೈದ್ಯಕೀಯ ಪರೀಕ್ಷೆಗಾಗಿ 44 ಕಿ.ಮಿ ದೂರದ

ಜೈಪುರಕ್ಕೆ ಹೋಗಬೇಕಾದುದು ಅನಿವಾರ್ಯವಾಗಿತ್ತು. ಹಳ್ಳಿ, ಕಗ್ಗಾಡು, ವಾಹನ ಸೌಕರ್ಯಗಳಿಲ್ಲದ ಸಂದರ್ಭದಲ್ಲಿ ಇದನ್ನು ನಿರೀಕ್ಷಿಸಲು ಸಾಧ್ಯವೇ ? ನ್ಯಾಯಾಲಯ ಕೇವಲ ತಾಂತ್ರಿಕ ವಿವರಗಳನ್ನು ಮಾತ್ರ ಪರೀಕ್ಷಿಸುತ್ತದೆಯೇ ಹೊರತು ಅಂತಹ ಸಂದರ್ಭಗಳಲ್ಲಿ ಸ್ತ್ರೀಯರ ಮಾನಸಿಕ ಹಾಗೂ ದೈಹಿಕ ಸೂಕ್ಷ್ಮತೆಗಳನ್ನು ಗಮನಕ್ಕೆ ತೆಗೆದುಕೊಳ್ಳುವುದಿಲ್ಲ.

ಬಾನ್ವರಿದೇವಿ ಕೆಲಸ ನಿರ್ವಹಿಸುತ್ತಿರುವ ಸಂದರ್ಭದಲ್ಲಿ ನಡೆದ ಈ ದೌರ್ಜನ್ಯ ದುಡಿಯುವ ಮಹಿಳೆಯರಿಗಿರುವ ರಕ್ಷಣೆಯ ಬಗ್ಗೆ ಹಲವಾರು ಪ್ರಶ್ನೆಯನ್ನು ಎತ್ತುತ್ತದೆ. 100 ವರ್ಷಗಳಿಂದ ನಿಂತ ನೀರಿನಂತೆ ಇದ್ದ ಅತ್ಯಾಚಾರದ ಕಾನೂನಿನಲ್ಲಿ ಮಹಿಳಾ ಸಂಘಟನೆಗಳ ಒತ್ತಾಯದ ಫಲವಾಗಿ ಹಲವಾರು ಬದಲಾವಣೆಯನ್ನು ತರಲಾಯಿತು. ಇದರ ಪರಿಣಾಮವಾಗಿ 'ಕಸ್ಟೋಡಿಯಲ್' ರೇಪ್ ಎಂಬುದನ್ನು ಕಾನೂನಿನ ವ್ಯಾಪ್ತಿಯಲ್ಲಿ ಸೇರಿಸಲಾಗಿದೆ. ರಕ್ಷಣೆ ನೀಡಬೇಕಾದವರೇ ಅತ್ಯಾಚಾರವನ್ನು ಎಸಗುವ ಹಾಗೂ ಶಿಕ್ಷೆಯನ್ನು ಕುರಿತು ಇದು ವಿವರಿಸುತ್ತದೆ. ಆದರೆ ದುಡಿಯುವ ಹೆಣ್ಣುಮಕ್ಕಳು ಲೈಂಗಿಕ ಹಿಂಸೆ, ಅತ್ಯಾಚಾರಕ್ಕೊಳಗಾಗದಂತೆ, ಯಾವುದೇ ರೀತಿಯ ರಕ್ಷಣೆಯನ್ನು ಈ ಕಾನೂನು ನೀಡವುದಿಲ್ಲ. ಈ ಕೊರತೆಯನ್ನು ಕಂಡ ಮಹಿಳಾ ಸಂಘಟನೆಗಳು ದುಡಿಯುವ ಹೆಣ್ಣು ಮಕ್ಕಳು ಲೈಂಗಿಕ ಹಿಂಸೆ, ಅತ್ಯಾಚಾರದಿಂದ ರಕ್ಷಣೆಗಾಗಿ ರಿಟ್ ಪಿಟಿಷನ್‌ನ್ನು ಸುಪ್ರೀಂ ಕೋರ್ಟಿನಲ್ಲಿ ಸಲ್ಲಿಸಿವೆ.

ಬಾನ್ವರಿದೇವಿಯ ಮೇಲೆ ನಡೆದ ಅತ್ಯಾಚಾರದ ಸ್ವರೂಪ ಸಂಕೀರ್ಣವಾದುದು. ಇದು ನಮ್ಮ ದೇಶದಲ್ಲಿ ಯಾವುದೇ ಮಹಿಳೆಯ ಮೇಲೆ ನಡೆಯಬಹುದಾದಂತ ದೌರ್ಜನ್ಯ. ಅವಳ ಮೇಲೆ ಅತ್ಯಾಚಾರ ನಡೆದರೂ, ಅವಳೇ ಈ ಅನರ್ಥಗಳಿಗೆ ಕಾರಣವೆಂಬಂತೆ ಇಡೀ ಗ್ರಾಮ ಅವಳನ್ನು ದೂರ ಮಾಡಿತು. ಅವಳ ಧ್ವನಿಯನ್ನು ತುಳಿಯಲು ಜಾತಿಗಳು ಒಂದಾದವು. ಪಕ್ಷಗಳು ಈ ಘಟನೆಯನ್ನು ಮತಗಳಿಕೆಯ ಸಂಚನ್ನಾಗಿಸಿವೆ. ಅಮಾಯಕಳಾದ ಅವಳನ್ನು ತುಳಿಯಲು ರಾಜಕೀಯ ಅಧಿಕಾರವನ್ನು ಬಳಸಿಕೊಳ್ಳಲಾಗುತ್ತಿದೆ. ಈ ಎಲ್ಲಾ ಸಂಕೀರ್ಣ ಶಕ್ತಿಗಳನ್ನು ಪ್ರತಿಭಟಿಸಲು ಬಾನ್ವರಿಗೆ ಸಾಧ್ಯವೇ ? ಬಾನ್ವರಿದೇವಿಗಿರುವ ಏಕೈಕ ಬೆಂಬಲವೆಂದರೆ ಮಹಿಳಾ ಸಂಘಟನೆಗಳು. ಸಂಘಟನೆಗಳ ಸಂಘಟಿತ ಬೆಂಬಲದಿಂದ ಮಾತ್ರ ಬಾನ್ವರಿದೇವಿಯಂತವರ ಧ್ವನಿಗಳು ಪ್ರತಿಧ್ವನಿಸಬಲ್ಲವು.

—ಹೆಚ್. ವಿ. ಪ್ರಭಾವತಿ
—ಹೆಚ್. ಎಸ್. ರಾಜೇಶ್ವರಿ

## ಓದುಗರಲ್ಲಿ ವಿನಂತಿ

ಪ್ರತಿಭಾನ್ವಿತ ದಲಿತ ಗಾಯಕ ಒಡೆಯರಾಜ ಅತ್ಯಂತ ಸಣ್ಣ ವಯಸ್ಸಿನಲ್ಲಿ ತೀರಿಕೊಂಡಿದ್ದಾರೆ. ಕೂಲಿಕಾರ ದಲಿತ ಕುಟುಂಬದಲ್ಲಿ ಜನಿಸಿದ ಒಡೆಯರಾಜನದು ಅದ್ಭುತ ಗಾಯನ ಕಲೆ. ಪರಂಪರಿಕವಾಗಿ ಕಲಿತ ಚೌಡಿಕಿ ಪದ, ಮೊಹರಂ ಪದ, ಭಜನೆ ಪದಗಳ ದಾಟಿಗೆ ಹೊಸ ವಿಚಾರಗಳನ್ನು ತುಂಬಿ ದಲಿತ ಚಳವಳಿಗೆ ದನಿಯಾದವರು ಒಡೆಯರಾಜ. ಕರುಳು ಬೇನೆ, ಕ್ಷಯಗಳಿಂದ ಬಹುಕಾಲ ನರಳಿದ ಒಡೆಯರಾಜ ಕೊನೆಗೂ ಅದಕ್ಕೆ ಬಲಿಯಾಗೇಬಿಟ್ಟರು. ತೀರಾ ಸಣ್ಣವಯಸ್ಸಿನ ಹೆಂಡತಿ ಮತ್ತು ಹಸುಗೂಸನ್ನು ತಂದೆ-ತಾಯಿಗಳ ಜತೆಗೆ ತೊರೆದು ಹೋಗಿರುವ ಒಡೆಯರಾಜ ಕಾಯಿಲೆಯ ಸಂದರ್ಭದಲ್ಲಿ ತುಂಬಾ ಸಾಲ ಮಾಡಿಕೊಂಡಿದ್ದರು. ಈಗವರ ಕುಟುಂಬ 50-60 ಸಾವಿರ ರೂ. ಸಾಲದಲ್ಲಿ ಸಿಕ್ಕಿಕೊಂಡಿದೆ.

ದಲಿತ ಚಳವಳಿಗೆ ದನಿ ನೀಡಿ ಮಾಯವಾದ ಒಡೆಯರಾಜನ ಬಡಕುಟುಂಬಕ್ಕೆ ನೆರವಾಗಲು ಗೆಳೆಯರು, ಹಿತೈಷಿಗಳು ಮತ್ತು ದಲಿತ ಸಂಘರ್ಷ ಸಮಿತಿ ತೀರ್ಮಾನಿಸಿದೆ. 'ಸಂಬುದ್ಧ–ಕರ್ನಾಟಕ' ಪತ್ರಿಕೆ 'ಒಡೆಯರಾಜ ನಿಧಿ' ಎಂಬ ಹೆಸರಿನಲ್ಲಿ ಹಣ ಸಂಗ್ರಹಿಸಲು ತೀರ್ಮಾನಿಸಿದೆ. ಮಾನಸದ ಓದುಗರು ತಮ್ಮ ನೆರವು ನೀಡಲು ಕೋರಲಾಗಿದೆ. ನಿಮ್ಮ ಎಂ.ಓ./ಚೆಕ್/ಡಿ.ಡಿ.ಗಳನ್ನು ಈ ವಿಳಾಸಕ್ಕೆ ಕಳಿಸಿ.

**ಸಂಬುದ್ಧ–ಕರ್ನಾಟಕ 'ಒಡೆಯರಾಜ ನಿಧಿ'**
109, 7ನೇ 'ಬಿ' ಮುಖ್ಯರಸ್ತೆ, 3ನೇ ಅಡ್ಡರಸ್ತೆ
ಆರ್.ಪಿ.ಸಿ. ಲೇ-ಔಟ್, ಬೆಂಗಳೂರು - 560 040

# ಹತ್ಯೇಗೀಡಾಗುತ್ತಿರುವ ಕುರಿಗಳು

ಜಾತೀಯತೆಯಿಂದ ಮುಕ್ತವಾಗಿರುವ ಬಿಹಾರನಲ್ಲಿ ವರದಕ್ಷಿಣೆ ಬೇಡಿಕೆ ಹೆಚ್ಚುತ್ತಿರುವುದರ ಜೊತೆಗೆ ಪ್ರತಿ ವರ್ಷ 1.6 ಲಕ್ಷ ಹೆಣ್ಣು ಶಿಶುಗಳನ್ನು ಹತ್ಯೆ ಮಾಡ ಲಾಗುತ್ತಿದೆ.

ಭಾರತದ ಅನೇಕ ರಾಜ್ಯಗಳಲ್ಲಿ ಹೆಣ್ಣು ಶಿಶುಹತ್ಯೆ ನಡೆಯುತ್ತಿರುವ ವಿಷಯ ನಮಗೆಲ್ಲ ತಿಳಿದಿದೆ. ಅವುಗಳಲ್ಲಿ ಬಿಹಾರ್ ರಾಜ್ಯವು ಒಂದು. ಈ ರಾಜ್ಯದ ಕೆಲವು ಜಿಲ್ಲೆಗಳಲ್ಲಿ ಹೆಣ್ಣು ಶಿಶುಗಳನ್ನು ಕೊಲ್ಲುವ ದಾಯಿಯರು ಸಾಕಷ್ಟಿದ್ದಾರೆ. ಅವರಿಗೆ ಕೊಡುವ ಹಣದ ಮೊತ್ತವು ನಿಗದಿಯಾಗಿರುತ್ತದೆ. ಬಿಹಾರಿನ ಕಾತಿಹಾರ್‌ನಲ್ಲಿ ಗಂಡು ಮಗು ಹುಟ್ಟಿದರೆ ಹೆರಿಗೆ ಮಾಡಿಸಿದ ದಾಯಿಗೆ 100 ರೂ. ಕೊಡುತ್ತಾರೆ, ಹೆಣ್ಣು ಮಗು ಹುಟ್ಟಿದರೆ 25 ರೂ. ಒಂದು ವೇಳೆ ಆ ಹೆಣ್ಣು ಮಗುವನ್ನು ಸಾಯಿಸಿದರೆ 50 ರೂ.ಗಳನ್ನು ಕೊಡುತ್ತಾರೆ.

"ಹೌದು ನಾವು ಹೆಣ್ಣು ಶಿಶುಗಳನ್ನು ಸಾಯಿಸುತ್ತೇವೆ. ನಮ್ಮಂತ ಬಡವರಿಗೆ ಇದನ್ನು ವಿರೋಧಿಸಲು ಸಾಧ್ಯವಿಲ್ಲ. ಎಷ್ಟೋ ತಂದೆಯರು ಹೆಣ್ಣು ಶಿಶುಗಳನ್ನು ಸಾಯಿಸಿದ ನಂತರ ಹಣ ಕೊಡಲು ನಿರಾಕರಿಸುತ್ತಾರೆ. ನಾವು ಯಾರ ಹತ್ತಿರ ನ್ಯಾಯ ಕೇಳೋಣ?" ಎಂದು ಕೇಳುತ್ತಾಳೆ ಬಿಹಾರದ ಒಂದು ಜಿಲ್ಲೆಯ ದಾಯಿ ಅನಿಲದೇವಿ. ತೇಜತೋಲ, ಫಸಿಯತೋಲ ಮತ್ತು ಬುಧುಚಿತ್ ಪ್ರದೇಶಗಳಲ್ಲಿ 40 ವರ್ಷಗಳಿಂದ ದಾಯಿ ಕೆಲಸ ಮಾಡಿಕೊಂಡು ಬಂದಿರುವ ಒಬ್ಬ ದಾಯಿ 150ಕ್ಕೂ ಹೆಚ್ಚು ಹೆಣ್ಣು ಶಿಶುಹತ್ಯೆ ಮಾಡಿರುತ್ತಾಳೆ.

ಇಂಥ ವಿಷಯವನ್ನು ಅನಿಲಳು ಬಹಿರಂಗವಾಗಿ ಹೇಳಿದರು ಅಲ್ಲಿಯ ಜನರು ಆಶ್ಚರ್ಯಪಡುವುದಿಲ್ಲ. ಅನೇಕ ಹೆಂಗಸರು ಹೊಟ್ಟೆಪಾಡಿಗಾಗಿ ಈ ದಾಯಿ ಕೆಲಸವನ್ನು ಮಾಡುತ್ತಾರೆ. ಜನರು ತಮಗೆ ಬೇಡವಾದ ಹೆಣ್ಣುಮಗುವನ್ನು ಕೊಲ್ಲಲು ಇವರನ್ನು ಉಪಯೋಗಿಸಿಕೊಳ್ಳುತ್ತಾರೆ. ಇಷ್ಟು ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿರುವ ಶಿಶುಹತ್ಯೆಯ ವಿಷಯವನ್ನು ಮಾತನಾಡುವಾಗ ಅವರ ಧ್ವನಿಯಲ್ಲಿ ಯಾವ ಬದಲಾವಣೆಯಿರುವುದಿಲ್ಲ. ಅದೊಂದು ವಾಸ್ತವ ಸಂಗತಿ, ಸಾಮಾನ್ಯ ವಿಷಯವೆಂಬಂತೆ ಚರ್ಚಿಸುತ್ತಿರುತ್ತಾರೆ.

"ನಾನು ಕಳೆದ 10 ವರ್ಷದಲ್ಲಿ 65ಕ್ಕೂ ಹೆಚ್ಚು ಹೆಣ್ಣು ಮಕ್ಕಳನ್ನು ಸಾಯಿಸಿದ್ದೇನೆ" ಎಂದು ಹೇಳುತ್ತಾಳೆ ದಾಯಿ ಫೂಲ್‌ದೇವಿ. ಕರುಣಾಮಯಿಯಂತೆ ಕಾಣುವ ಈ ಅಜ್ಜಿ ತನ್ನ 40ರ ದಶಕದಲ್ಲಿದ್ದಾಗ ಹೆಣ್ಣು ಮಗುವನ್ನು ಸಾಯಿಸುವ ವಿಷಯದಲ್ಲಿ ಯಜಮಾನನ ಆದೇಶವನ್ನು ಎಂದೂ ಪ್ರಶ್ನಿಸುತ್ತಿರಲಿಲ್ಲ. "ಇಲ್ಲಿ ಅದೊಂದು ಪದ್ಧತಿಯಾಗಿದೆ" ಎಂದು ವಿವರಿಸುತ್ತಾಳೆ.

ಬಿಹಾರಿನ ಜಿಲ್ಲೆಗಳಲ್ಲಿ ಅನೇಕ ಪೀಳಿಗೆಗಳಿಂದ ಹೆಣ್ಣು ಮಕ್ಕಳನ್ನು ಅವು ಸೂರ್ಯನ ಬೆಳಕನ್ನು ಕಾಣುವ ಮೊದಲೆ ಕೊಲ್ಲುತ್ತಾ ಬಂದಿದ್ದಾರೆ. ಇಲ್ಲಿ ಕೊಲ್ಲುವ ವಿಧಾನಗಳು ಎಷ್ಟು ವೈವಿಧ್ಯವಾಗಿರುತ್ತವೊ ಅಷ್ಟೇ ಸರಳವಾಗಿರುತ್ತವೆ. ಸಾಮಾನ್ಯವಾಗಿ ಹಗ್ಗದಿಂದ ಕತ್ತು ಹಿಸುಕಿ ಸಾಯಿಸುತ್ತಾರೆ. ಕೆಲವು ಸಮಯ ಬೆನ್ನೆಲುಬನ್ನು ಹಿಂದಕ್ಕೆ ಬಾಗಿಸಿ ಲಟಕ್ಕನೆ ಮುರಿಯುತ್ತಾರೆ. ಒಂದು ಮುಷ್ಟಿ ಗೊಬ್ಬರವನ್ನು ಮಗುವಿನ ಗಂಟಲಿಗೆ ತುರುಕಿ ಸಾಯಿಸುತ್ತಾರೆ. ಇಲ್ಲ ಕಪ್ಪು ಉಪ್ಪನ್ನು ಮಗುವಿನ ಬಾಯಿಗೆ ಇಡುತ್ತಾರೆ. ಒಬ್ಬ ಅನುಭವಿ ದಾಯಿ ಹೇಳುವಂತೆ ಒಂದು ಮಗುವನ್ನು ಸಾಯಿಸಲು ಒಂದು ಗಂಟೆ ಬೇಕಾಗುತ್ತದೆ.

ಅನುಭವವಿಲ್ಲದ ದಾಯಿಯರು ಒಂದು ಮಣ್ಣಿನ ಮಡಿಕೆಯಲ್ಲಿ ಮಗುವನ್ನು ಹಾಕಿ ಹುದುಗಿನ ಹಿಟ್ಟಿನಿಂದ ಅದರ ಬಾಯಿಯನ್ನು ಮುಚ್ಚಿ ಉಸಿರು ಕಟ್ಟಿಸಿ ಸಾಯಿಸುತ್ತಾರೆ. "ಈ ವಿಧಾನದಲ್ಲಿ ಮಗು ಸಾಯುವುದನ್ನು ಯಾರು ನೋಡಬೇಕಾಗುವುದಿಲ್ಲ" ಎನ್ನುತ್ತಾಳೆ ಫೂಲ್ ದೇವಿ.

ಮಗು ಸಾಯಿಸುವುದನ್ನು ನೋಡಿದರೆ ಎಂಥ ಅನುಭವವಿರುವ ದಾಯಿಯ ಎದೆಯಲ್ಲೂ ನಡುಕ ಹುಟ್ಟಿಸುತ್ತದೆ. ಕುತ್ತಿಗೆ ಹಿಸುಕಿದಾಗ ನಾಲಗೆ ಹೊರ

ಬರುತ್ತದೆ ಮತ್ತು ಕಣ್ಣುಗುಡ್ಡೆ ಉಬ್ಬುತ್ತದೆ. ಅದೊಂದು ಭಯಂಕರ ದೃಶ್ಯ. ನಮ್ಮಂತ ಗಟ್ಟಿ ಮನಸ್ಸಿನವರೂ ಸಾಯಿಸಿದ ಹಲವಾರು ದಿನಗಳು ನಿದ್ದೆ ಮಾಡಲಾಗುವುದಿಲ್ಲ ಎಂದು ಹೇಳುತ್ತಾಳೆ ಫೂಲ್.

ಕೊಲ್ಲುವಾಗ ಅವರಿಗೆ ಏನು ಅನ್ನಿಸುವುದಿಲ್ಲ. ಆದರೆ ಕೊಂದ ನಂತರ ಅದು ಅವರನ್ನು ಕಾಡುತ್ತಿರುತ್ತದೆ. ರಾತ್ರಿ ಹೊತ್ತು ಎಲ್ಲಿ ಯಾವುದಾದರೂ ಕ್ರೂರ ಪ್ರಾಣಿ ಬಂದು ಇವರು ಹೂತಿರುವ ಹೆಣವನ್ನು ಅಗೆದು ಎತ್ತಿಕೊಂಡು ಹೋಗುತ್ತದೊ ಎಂದು ಭಯವಾಗುತ್ತಿರುತ್ತದೆ. ಈ ಪ್ರದೇಶದಲ್ಲಿ ಅನೇಕ ದಾಯಿಯರು ಶವಗಳನ್ನು ಹತ್ತಿರದ ಖಾಸಿಘಾಟ್ ಮತ್ತು ಚಾಮುಖಿ ನದಿಗೆ ಎಸೆಯುತ್ತಾರೆ. ಸರಿಯಾದ ಅಂತ್ಯಸಂಸ್ಕಾರ ಹೊಂದದ ಈ ಆತ್ಮಗಳ ಚಿಂತೆಯೆ ನನ್ನನ್ನು ಬಾಧಿಸುತ್ತಿರುತ್ತದೆ ಎಂದು ಮತ್ತೊಬ್ಬ ದಾಯಿ ಸೀಮಾದೇವಿ ಹೇಳುತ್ತಾಳೆ.

ಇದು ಮಗುವಿನ ತಂದೆಯ ಪಾಪದ ಕೆಲಸ. ಇದರಲ್ಲಿ ನಮ್ಮ ಆಯ್ಕೆಗೆ ಅವಕಾಶವೆಲ್ಲಿ? ನಾವು ಯಾಕೆ ಚಿಂತಿಸಬೇಕು ಎಂದು ವಾದಿಸುತ್ತಾಳೆ ಫೂಲ್.

ಹೆಣ್ಣು ಶಿಶುವನ್ನು ಕೊಲ್ಲುವ ಸೂಚನೆ ಸಾಮಾನ್ಯವಾಗಿ ಕುಟುಂಬದ ಯಜಮಾನನಿಂದ ಬರುತ್ತದೆ. ಎಂತ ಮಗು ಎಂದು ತಿಳಿದ ತಕ್ಷಣ ಹೆಣ್ಣು ಮಗುವಾಗಿದ್ದರೆ ಕೊಲ್ಲಲು ಆದೇಶ ನೀಡುತ್ತಾರೆ. ಕೊಲ್ಲಲು ನಿರಾಕರಿಸಿದರೆ ಅವರು ಕೊಡುವ ಹಿಂಸೆಗೆ ಗುರಿಯಾಗಬೇಕಾಗುತ್ತದೆ.

"ನನಗೆ ಅಸಾಮಾನ್ಯ ಧೈರ್ಯವಿದೆ ಎಂದು ನಾನು ಸುಳ್ಳು ಹೇಳುವುದಿಲ್ಲ. ಕೋಪಗೊಂಡ ತಂದೆಗಳ ಹೆದರಿಕೆಯಿಂದ ನಾನು ಈ ಕೆಲಸ ಮಾಡುತ್ತೇನೆ. ಹಿಸ್ಟೀರಿಕ್ ಆದ ತಾಯಂದಿರು ಎಷ್ಟೇ ಗೋಳಾಡಿದರು ನಾನು ನನ್ನ ಮನಸ್ಸನ್ನು ಬದಲಾಯಿಸುವುದಿಲ್ಲ" ಎಂದು ಮನಿಹಾರಿ ಪ್ರದೇಶದ ಭಾಗ್ನಿ ಹೇಳುತ್ತಾಳೆ. ಮೂರು ವಾರಗಳ ಹಿಂದೆ ತಾನು ಸಾಯಿಸಿದ ಮಗುವಿನ ತಾಯಿಯ ದುಃಖವನ್ನು ನೆನೆಸಿಕೊಳ್ಳುತ್ತಾಳೆ. ತಾಯಿ ತನ್ನ ಮೊದಲ ಮಗುವನ್ನು ಉಳಿಸಿ ಎಂದು ಎಷ್ಟು ಕೇಳಿಕೊಂಡರು ಅವಳ ಗಂಡ ಒಪ್ಪದೆ, ಇಲ್ಲದಿದ್ದರೆ ಮಗುವಿನ ತಲೆಯನ್ನು ಗೋಡೆಗೆ ಅಪ್ಪಳಿಸುತ್ತೇನೆ ಎಂದು ಹೆದರಿಸುತ್ತಾನೆ. ಹೀಗೆ ಬಿಹಾರ್‌ನಲ್ಲಿ ಒಂದಾದ ಮೇಲೆ ಒಂದು ಶಿಶುಹತ್ಯೆ ನಡೆಯುತ್ತಲೇ ಇರುತ್ತದೆ.

ಈ ರೀತಿ ವರದಿಯಾಗದ ಹತ್ಯೆಗಳು ಹೆಚ್ಚಾಗಿ ಮೇಲು ಜಾತಿಗೆ ಸೇರಿದ ಚಾಮರರಲ್ಲಿ ನಡೆಯುತ್ತಿರುತ್ತದೆ. ರಜಪೂತರು, ಭೂಮಿಹಾರರು ಮತ್ತು ಬ್ರಾಹ್ಮಣರು ತಮ್ಮ ಪ್ರತಿಷ್ಠೆಯನ್ನು ದುಬಾರಿ ವರದಕ್ಷಿಣೆ ಕೇಳುವುದರ ಮೂಲಕ ತೋರಿಸಿಕೊಳ್ಳುತ್ತಾರೆ. ಈ ವರದಕ್ಷಿಣೆ ಪದ್ಧತಿಯೆ ಹೆಣ್ಣು ಮಗುವಿನ ಬಗ್ಗೆ ಪಕ್ಷಪಾತ ಮನೋಭಾವ ಬೆಳೆಸುತ್ತದೆ. ಹೆಣ್ಣು ಮಕ್ಕಳನ್ನು "ಅವರೊಂದು ಹೊರೆ, ಆದಷ್ಟು ಬೇಗ ಆ ಹೊರೆಯನ್ನು ಇಳಿಸಿಕೊಳ್ಳಬೇಕು" ಎಂಬ ದೃಷ್ಟಿಯಿಂದ ನೋಡುತ್ತಾರೆ.

ರಜಪೂತರಲ್ಲಿ ಹುಡುಗಿಯ ಮನೆಯವರು ಹುಡುಗನಿಗೆ ಏನಿಲ್ಲವೆಂದರು 5 ಲಕ್ಷ ನಗದು ವರದಕ್ಷಿಣೆ ಕೊಡಬೇಕು. ಅದರ ಜೊತೆಗೆ ಒಡವೆ, ಉಡುಗೊರೆ, ಮದುವೆ ಖರ್ಚು ಮತ್ತು ಇತರೆ ಅಂತ ಸುಮಾರು 12 ಲಕ್ಷ ಖರ್ಚು ಮಾಡಬೇಕಾಗುತ್ತದೆ. ಭೂಮಿಹಾರರಲ್ಲಿ 'ತಿಲಕ್' ಅಂತ 16 ರಿಂದ 20 ಲಕ್ಷ ವರದಕ್ಷಿಣೆ ಕೊಡಬೇಕು. ಅನೇಕ ಮನೆಗಳಲ್ಲಿ 4 ರಿಂದ 5 ಹೆಣ್ಣುಮಕ್ಕಳಿರುತ್ತಾರೆ. ಹಾಗಿರುವಾಗ, ತಂದೆಯರು ಹೆಣ್ಣುಮಕ್ಕಳನ್ನು ಸಾಯಿಸಿದರೆ ಅವರನ್ನು ದೂರುವುದಕ್ಕಾಗುತ್ತದಾ? ಎಂದು ಪ್ರಶ್ನಿಸುತ್ತಾಳೆ ಕಡ್ವಪುರದ ದಾಯಿ ಶಾನೊ.

ಕೆಲವು ದಾಯಿಯರು ತಾವು ದಯೆ ತೋರಿ ಕೊಲೆ ಮಾಡುತ್ತೇವೆ ಎಂದು ತಮಗೆ ತಾವೆ ಸಮಾಧಾನ ಮಾಡಿಕೊಳ್ಳುತ್ತಾರೆ. ಉದಾಹರಣೆಗೆ ಶಾನೊ "ತಾನು ಈ ಕೆಟ್ಟ ಪುರುಷ ಪ್ರಧಾನ ಜಗತ್ತಿನಲ್ಲಿ ಮುಂದೆ ಕೆಟ್ಟ ಅನುಭವ ಪಡೆಯುವುದರಿಂದ ಹೆಣ್ಣು ಮಗುವನ್ನು ಬಿಡುಗಡೆ ಮಾಡಿದ ಪುಣ್ಯದ ಕೆಲಸ ಮಾಡಿದ್ದೇನೆ" ಎಂದು ಭಾವಿಸುತ್ತಾಳೆ.

ಲಿಂಗ ಪಕ್ಷಪಾತಭಾವ ಎಲ್ಲ ಕಡೆಯಿದೆ. ಗಂಡು ಮಕ್ಕಳಿಗೆ ಹಾಲು ಕೊಡುತ್ತಾರೆ. ಹೆಣ್ಣು ಮಕ್ಕಳು ಬರಿ ನೀರಿನಿಂದಲೇ ತೃಪ್ತಿ ಪಡಬೇಕು. ಮಿಥಿಲೇಶನಲ್ಲಿ ಒಬ್ಬ ಮಹಿಳೆ ತನ್ನ ಹೆಣ್ಣು ಮಗುವನ್ನು ಮೂರು ತಿಂಗಳ ಕಾಲ (ಸಾಯುವವರೆಗೆ) ಜೀವಂತವಾಗಿ ನೀರಿನಲ್ಲಿಟ್ಟಿದ್ದಳು. ಒಂದು ವೇಳೆ ಆ ಮಗು ಬದುಕಿದ್ದರೆ ಮುಂದೆ ಸಾಕಷ್ಟು ವರದಕ್ಷಿಣೆ ಕೊಡುವುದಕ್ಕಾಗದೇ ಜೀವಂತ ಶವವಾಗಿ ಜೀವನ ನಡೆಸಬೇಕಾಗುತ್ತಿತ್ತು.

ಅದಕ್ಕಿಂತ ಹೆಣ್ಣು ಮಕ್ಕಳನ್ನು ಈ ರೀತಿ ಸಾಯಿಸುವುದೇ ಲೇಸೆಂದು ಶಾನೊ ಅಭಿಪ್ರಾಯಪಡುತ್ತಾಳೆ.

ಈ ರೀತಿ ಹೆಣ್ಣುಮಕ್ಕಳ ಭವಿಷ್ಯವನ್ನು ಮೊಟಕು ಗೊಳಿಸುವ ಪದ್ಧತಿ ಬಿಹಾರ ಸಮಾಜದ ಅವಿಭಾಜ್ಯ ಅಂಗವಾಗಿ ಹೋಗಿದೆ. ಕಾತಿಹಾರದ ಕೆಲವು ತಿಳುವಳಿಕೆಯಿರುವ ಜನರು ಹೆಣ್ಣು ಶಿಶುಹತ್ಯೆಯನ್ನು ಒಂದು ಸಾಮಾಜಿಕ ಪಿಡುಗು ಎಂದು ಖಂಡಿಸಿದ್ದಾರೆ. ಇದರಿಂದ ಇದಕ್ಕೆ ಮೂಲ ಕಾರಣವಾದ ವರದಕ್ಷಿಣೆ ವಿರುದ್ಧದ ಹೋರಾಟಕ್ಕೆ ಸ್ವಲ್ಪಮಟ್ಟಿಗೆ ಉತ್ತೇಜನ ತೋರಿಸಿದಂತಾಗಿದೆ.

ಕಾತಿಹಾರದ ಡಿ.ಎಸ್. ಕಾಲೇಜಿನ ಉಪಾಧ್ಯಾಯರಾದ (ಶಿಕ್ಷಕ) ಇಂದು ಶೇಖರ ಚೌಧರಿ "ಆನುಭವೀಕರಣ ಹೆಚ್ಚುತ್ತಿರುವ ಈ ಸಂದರ್ಭದಲ್ಲಿ ತಿಲಕ್ (ವರದಕ್ಷಿಣೆ) ಪದ್ಧತಿಯನ್ನು ಬಿಹಾರದ ಮದುವೆ ವ್ಯಾಪಾರದಿಂದ ಬೇರ್ಪಡಿಸುವುದು ಸಾಧ್ಯವೆ ಇಲ್ಲ" ಎಂದು ಹೇಳುತ್ತಾರೆ. ಚೌಧರಿಯವರಿಗೆ ಪದವೀಧರರಾದ 20 ವರ್ಷದ ತಮ್ಮ ಮಗಳ ಮದುವೆ ಯೋಚನೆಯಿಂದ ರಾತ್ರಿ ನಿದ್ದೆಯಿಲ್ಲದಂತಾಗಿದೆ. ಭೂಮಿಹಾರ ಸಮುದಾಯದಲ್ಲಿ ಕೆಲಸದಲ್ಲಿರುವ ಹುಡುಗರ ರೇಟ್ ದಿನೇ ದಿನೇ ಏರುತ್ತಿದೆ. ಆದರೆ ನಮ್ಮ ಮಗಳಿಗೆ ಇಂಗ್ಲೀಷ್ ವಿದ್ಯಾಭ್ಯಾಸ ಕೊಡಿಸಿರುವುದರಿಂದ ನಮಗೆ 2 ಲಕ್ಷದ ರಿಯಾಯಿತಿ ಸಿಗಬಹುದು ಎಂದು ಆಶಿಸುತ್ತಾರೆ ದುಃಖಿತಪ್ತ ತಂದೆ ಚೌಧರಿ.

ಆದರೆ ಮೈಥಿಲಿ ಬ್ರಾಹ್ಮಣ ಸಮುದಾಯದ ಡಾ. ದೇವದತ್ತ ಝಾ ಹೇಳುವಂತೆ ಅವರ ಜಾತಿಯಲ್ಲಿ ಹೆಣ್ಣು ಮಕ್ಕಳನ್ನು ಓದಿಸಿದಷ್ಟು ವರದಕ್ಷಿಣೆ ಸಮಸ್ಯೆ ಜಾಸ್ತಿಯಾಗುತ್ತದೆ. ಸ್ನಾತಕೋತ್ತರ ಪದವಿ ಪಡೆದ ಹುಡುಗಿ ಅನಕ್ಷರಸ್ತ ಜಮೀನುದಾರನನ್ನು ಮದುವೆಯಾಗಲು ಒಪ್ಪುವುದಿಲ್ಲ, ಐ.ಎ.ಎಸ್. ಹುಡುಗನನ್ನು ಹುಡುಕಿದರೆ ಖರ್ಚು ಹೆಚ್ಚಾಗುತ್ತದೆ. ಅವರ ಪ್ರಕಾರ ಈ ಸಮಸ್ಯೆ ಪರಿಹಾರ ಕಂಡುಕೊಳ್ಳಲಾಗದಷ್ಟು ಬಿಗಡಾಯಿಸಿದೆ.

ಆದರೆ ಸಮುದಾಯದ ಮುಖಂಡರುಗಳು ವರದಕ್ಷಿಣೆಯನ್ನು ಇನ್ನೂ ಹೆಚ್ಚು ರ್‍ಯಾಶನಲೈಸ್ ಮಾಡುತ್ತಾರೆ. ಭೂಮಿಹಾರ ಜಮೀನುದಾರ ಸಂಘ ಸೇನೆಯ ಅಧ್ಯಕ್ಷರಾದ ಡಾ. ಭೂಲಸಿಂಗ್ ಹೇಳುತ್ತಾರೆ "ಮದುವೆ ಹೊತ್ತಿನಲ್ಲಿ ನಮ್ಮ ಹೆಣ್ಣು ಮಕ್ಕಳಿಗೆ ನಾವು ಎಷ್ಟು ಕೊಡುತ್ತೇವೊ ಅದು ನಾವು ಅವರ ಮೇಲೆ ಇಟ್ಟಿರುವ ಪ್ರೀತಿಯನ್ನು ತೋರಿಸುತ್ತದೆ". ಹೆಣ್ಣು ಶಿಶುಹತ್ಯೆಯನ್ನು ಒಪ್ಪಿಕೊಳ್ಳದ ಸಿಂಗ್ ಇದು ಇತರ ಕೆಲವು ಜಾತಿಯಲ್ಲಷ್ಟೆ ಕಂಡು ಬರುತ್ತದೆ ಎಂದು ಹೇಳುತ್ತಾರೆ.

ಪೋಲೀಸರು ಇನ್ನು ಒಂದು ಹೆಜ್ಜೆ ಮುಂದೆ ಹೋಗಿ ಈ ಪ್ರದೇಶದಲ್ಲಿ ಹೆಣ್ಣು ಶಿಶು ಹತ್ಯೆಯೆ ನಡೆಯುತ್ತಿಲ್ಲ ಎಂದು ವಾದಿಸುತ್ತಾರೆ. ಕಾತಿಹಾರದ ಎಸ್.ಪಿ. ಶತ್ರುಘ್ನ ಪ್ರತಾಪ್ ಸಿಂಗ್‌ರ ಪ್ರಕಾರ ಇಲ್ಲಿಯವರೆಗೆ ಯಾವುದೆ ಠಾಣೆಯಲ್ಲಿ ಈ ರೀತಿಯ ಅಪರಾಧದ ಒಂದೇ ಒಂದು ಎಫ್.ಐ.ಆರ್. ದಾಖಲಾಗಿಲ್ಲ. ಈ ಜಿಲ್ಲೆಯಲ್ಲಿ ಹೆಣ್ಣು ಶಿಶುಹತ್ಯೆ ನಡೆಯುತ್ತಿದೆ ಎಂದು ತಿಳಿಸುವ ಯಾವುದೇ ಲಿಖಿತ ದಾಖಲೆ ಇಲ್ಲ. 'ತಾವು ಹೆಣ್ಣು ಶಿಶುಗಳನ್ನು ಸಾಯಿಸುತ್ತೇವೆ ಎಂದು ದಾಯಿಯರು ತಮ್ಮ ಮುಂದೆ ಒಪ್ಪಿಕೊಂಡಿದ್ದಾರೆ ಎಂದು ಹೇಳುವ ಸಮಾಜ ಕಾರ್ಯಕರ್ತರು ಪೋಲೀಸರಿಗೆ ಸಾಕ್ಷಿ ಅಥವಾ ಹೆಸರನ್ನು ಹೇಳಲು ನಿರಾಕರಿಸುತ್ತಾರೆ ಎಂದು ದೂರು ಹೇಳುತ್ತಾರೆ ಸಿಂಗ್.

"ನಾವು ಯಾಕೆ ಸಾಕ್ಷಿ ಹೆಸರುಗಳನ್ನು ಹೇಳಬೇಕು" ಎಂದು ಪ್ರಶ್ನಿಸುತ್ತಾರೆ ಹೆಣ್ಣು ಶಿಶುಹತ್ಯೆಯನ್ನು ನಿರ್ಮೂಲ ಮಾಡಲು ದಾಯಿಯರಲ್ಲಿ ಕೆಲಸ ಮಾಡುತ್ತಿರುವ ಸ್ವಯಂ ಸೇವಾ ಸಂಸ್ಥೆ 'ಬಾಲ ಮಹಿಳಾ ಕಲ್ಯಾಣ (ಬಿ.ಎಂ.ಕೆ.)'ದ ಅನಿಲಕುಮಾರ. "ಪೋಲೀಸರಿಗೆ ವಿಷಯ ತಿಳಿಸಿದರೆ ದಾಯಿಯರನ್ನು ಸಂಘದಿಂದ ಹೊರ ಹಾಕಬಹುದು. ಅದಕ್ಕಿಂತ ಈಗಾಗಲೇ ಅರೆಸ್ಟ್ ಮಾಡಿರುವವರಿಂದ ಏನು ಉಪಯೋಗವಾಗಿದೆ ? ನಮ್ಮ ಬಿ.ಎಂ.ಕೆ.ಯ ಗುರಿ ದಾಯಿಯರಿಗೆ ಶಿಕ್ಷಣ ಕೊಟ್ಟು ಅವರಲ್ಲಿ ಆತ್ಮವಿಶ್ವಾಸ ಬೆಳೆಸಿ ಹೆಣ್ಣು ಶಿಶುಗಳನ್ನು ಸಾಯಿಸುವ ಆದೇಶ ಬಂದರೆ ಅದನ್ನು ನಿರಾಕರಿಸುವಂತೆ ಮಾಡುವುದು. ಈ ಶಿಶುಹತ್ಯೆಯನ್ನು ನಿರ್ಮೂಲ ಮಾಡುವುದರಲ್ಲಿ ನಮಗಿಂತ ಪೋಲೀಸರು ಹೆಚ್ಚು ಸಮರ್ಥರಾಗಿದ್ದಾರೆ. ಆದರೆ ಅವರು ಪ್ರಯತ್ನಿಸುವುದೆ ಇಲ್ಲ. ಅವರು ತಮ್ಮ ಅಸಹಾಯಕತೆಯ ಸೋಗನ್ನು ಬಿಡಬೇಕು. ಸತ್ಯವೇನು ಎಂಬುದನ್ನು ಕಂಡು ಹಿಡಿಯಲು ಗಂಭೀರ ಪ್ರಯತ್ನ ನಡೆಸಿದರೆ ಆಗ ನಮ್ಮ ರಾಜ್ಯದಲ್ಲಿ ಈ ಪದ್ಧತಿ ಎಷ್ಟು ಆಳವಾಗಿ ಬೇರೂರಿದೆ ಎಂದು ತಿಳಿಯುತ್ತದೆ" ಎಂದು ಹೇಳುತ್ತಾರೆ ಅನಿಲ.

ಯೂನಿಸೆಫ್ ಸಹಾಯದಿಂದ ನಡೆಯುತ್ತಿರುವ ಪಾಟ್ನಾದ ಸ್ವಯಂ ಸೇವಾ ಸಂಸ್ಥೆ 'ಅಧಿತಿ' ಇತ್ತೀಚೆಗೆ ಹೆಣ್ಣು ಶಿಶುಹತ್ಯೆ ಕುರಿತು ಒಂದು ವರದಿಯನ್ನು ಬಿಡುಗಡೆ ಮಾಡಿತು. ಅದರಲ್ಲಿ ರಾಜ್ಯದ ವಿವಿಧ ಕಡೆಯಿಂದ ಬಂದ ದಾಯಿಯರು ತಾವು ಹೆಣ್ಣು ಶಿಶುಗಳ ಕೊಲೆ ಮಾಡುವುದನ್ನು ಒಪ್ಪಿಕೊಂಡಿದ್ದಾರೆ. ಸಿತಮಾರಿ, ಪೂರ್ನಿಯ ಭಾಗಲ್ಪುರ್ ಮತ್ತು ಕಾತಿಹಾರ್ ಜಿಲ್ಲೆಗಳಲ್ಲಿನ ಸಮಾಜ ಕಾರ್ಯಕರ್ತರಿಂದ ಸಂಗ್ರಹಿಸುವ ಮಾಹಿತಿ ಸಾಕ್ಷಿ ಆಧಾರದ ಮೇಲೆ ಬಿಹಾರ್‌ನಲ್ಲಿ ಪ್ರತಿವರ್ಷ ಸುಮಾರು 1,63,200 ಹೆಣ್ಣು ಶಿಶುಹತ್ಯೆಗಳು ನಡೆಯುತ್ತಿದೆ ಎಂದು ಈ ವರದಿ ತಿಳಿಸುತ್ತದೆ.

ವರದಿಯನ್ನು ಸ್ವೀಕರಿಸಿದ ರಾಜ್ಯಸರ್ಕಾರ ಇದನ್ನು ಒಪ್ಪಿಕೊಳ್ಳುತ್ತಲೂ ಇಲ್ಲ ನಿರಾಕರಿಸುತ್ತಲೂ ಇಲ್ಲ ಎಂದು ವಿಶೇಷವಾಗಿ ಹೇಳುವ ಅಗತ್ಯವಿಲ್ಲ ಎನ್ನುತ್ತಾರೆ ಅಧಿತಿಯ ವಿಜಿ ಶ್ರೀನಿವಾಸನ್. ಜನರಲ್ಲಿ ಅರಿವು ಮೂಡಿಸಲು ಸ್ವಯಂ ಸೇವಾ ಸಂಸ್ಥೆಯವರು ಹಳ್ಳಿಗಳಲ್ಲಿ ಕಾರ್ಯಗಾರಗಳನ್ನು ನಡಸುತ್ತಿದ್ದಾರೆ.

ಇತ್ತೀಚೆಗೆ ಬಿಹಿಪುರ್‌ನಲ್ಲಿ ನಡೆದ ಒಂದು ಸಭೆಯಲ್ಲಿ ಹೆಣ್ಣು ಶಿಶುಹತ್ಯೆ ನಿರ್ಮೂಲ ಮಾಡಲು ಕೆಲವು ಪರಿಹಾರಗಳು ಹೊರಬಂದವು. ದಾಯಿಯರು, ಸಮಾಜ ಕಾರ್ಯಕರ್ತರ ಮುಂದೆ ತಾವು 25 ರೂ.ಗಳಿಗೆ ಹೆಣ್ಣು ಮಕ್ಕಳನ್ನು ಸಾಯಿಸುವುದರ ಬಗ್ಗೆ 'ಹೇಳಲು' ಒಪ್ಪಿಕೊಂಡರು. ಹಳ್ಳಿಗಳಲ್ಲಿ ತಂದೆ ತಾಯಿ, ಮತ್ತು ದಾಯಿಯರು ಸೇರಿದಂತೆ ಸ್ಥಳೀಯ ಸಮಿತಿಗಳನ್ನು ರಚಿಸಿ ಅದು ಆ ಪ್ರದೇಶದ ಜನನ ಮರಣದ ದಾಖಲೆಯನ್ನು ಮಾಡುವಂತೆ ಒಂದು ನಿರ್ಣಯ ಕೈಗೊಳ್ಳಲಾಯಿತು.

ಈ ವಿಧಾನಗಳು ಎಷ್ಟೇ ಸ್ವಾಗತಾರ್ಹವಾದರೂ, ಸಮಾಜ ಕಾರ್ಯಕರ್ತರು ಹೇಳುವುದೇನೆಂದರೆ 'ಸರ್ಕಾರದ ಕಾರ್ಯವಾದ ಜನನ ಮತ್ತು ಮರಣದ ಸರ್ಟಿಫಿಕೇಟ್ ಮಾಡಿಸುವ ಕಾನೂನು, ಮದುವೆಗಳಿಗೆ ಬರುವ ಜನರ ಸಂಖ್ಯೆಯನ್ನು ನಿಯಂತ್ರಿಸುವುದು ಮತ್ತು ಹೆಣ್ಣು ಶಿಶುಹತ್ಯೆಯ ವಿರುದ್ಧ ದೊಡ್ಡ ಪ್ರಮಾಣದಲ್ಲಿ ಪ್ರಚಾರ ಕೊಡುವುದು, ಮುಂತಾದವುಗಳಿಗೆ ಬದಲಿ ವಿಧಾನಗಳನ್ನು ಕಂಡುಕೊಳ್ಳಲು ಸಾಧ್ಯವಾಗುವುದಿಲ್ಲ. ಸರ್ಕಾರವು ಹೆಣ್ಣು ಮಕ್ಕಳಿಗೆ ಆಶ್ರಯ ತಾಣಗಳನ್ನು ಪ್ರಾರಂಭಿಸಬೇಕು. 21ನೇ ಶತಮಾನಕ್ಕೆ ನಾವು ಹೆಣ್ಣು ಶಿಶುಗಳನ್ನು ಕೊಲ್ಲುವ ಕೆಟ್ಟ ಪದ್ಧತಿಯಿಂದ ಮುಕ್ತರಾಗುವಷ್ಟು ನಾಗರಿಕರಾಗೋಣ' ಎಂದು ಹೇಳುತ್ತಾರೆ ವಿಜಿ ಶ್ರೀನಿವಾಸನ್.

**ಶಾಪಗ್ರಸ್ಥ ಹೆಣ್ಣು**

ಬಿಹಾರದ ಗೋಗಾಚಿಯಲ್ಲಿ ಹೆಣ್ಣು ಶಿಶುಗಳನ್ನು ಸಾಯಿಸುವುದಿಲ್ಲ ಆದರೆ ಸೊಸೆಯರನ್ನು ಪಾಟ್ನಾದಲ್ಲಿರುವ ಲಿಂಗ ನಿರ್ಧರಿಸುವಂತ ಕ್ಲಿನಿಕ್‌ಗಳಿಗೆ ಕಳುಹಿಸುತ್ತಾರೆ.

ಕಾತಿಹಾರ ಜಿಲ್ಲೆಯಿಂದ 50 ಕಿ.ಮೀ. ದೂರದಲ್ಲಿರುವ ಗೋಗಾಚಿ ಒಂದು ಮುಂದುವರಿದ ಹಳ್ಳಿಯಾಗಿದ್ದು ಅಕ್ಕಪಕ್ಕ ಹಳ್ಳಿಗಳಿಗೆ ಮಾದರಿ ಹಳ್ಳಿಯಾಗಿದೆ. ಈ ಹಳ್ಳಿಯ ಶ್ರೀಮಂತ ರಜಪೂತ ಕುಟುಂಬದ ಗಂಡಸರು ಓದುವುದಕ್ಕೆ ದೆಹಲಿಯ ತನಕ ಹೋಗುತ್ತಾರೆ. ಗರ್ಭಿಣಿ ಹೆಂಗಸರನ್ನು ಚಿಕಿತ್ಸೆಗೆ ಹತ್ತಿರದ ಮನಿಹಾರಿ ಆಸ್ಪತ್ರೆಗೆ ಕಳುಹಿಸುತ್ತಾರೆ. ಅನೇಕ ಮನೆಗಳಲ್ಲಿ ಟಿ.ವಿ.ಗಳಿವೆ. ಮತ್ತು ಗೋಗಾಚಿಯ ವರನಿಗೆ ಮದುವೆ ಮಾರುಕಟ್ಟೆಯಲ್ಲಿ ಭಾರಿ ರೇಟಿದೆ.

ಇವೆಲ್ಲವು ಅತ್ಯಂತ ಜಾಗರೂಕತೆಯಿಂದ ಯೋಚಿಸಲ್ಪಟ್ಟಿರುತ್ತವೆ. ಹಳ್ಳಿಯ ಹಿರಿಯರು ಹೇಳುವಂತೆ "ನಾವು ಮದುವೆ ವಯಸ್ಸಿಗೆ ಬಂದ ಗಂಡು ಮಕ್ಕಳನ್ನು ಪಟ್ಟಣದಲ್ಲಿ ಐ.ಎ.ಎಸ್. ಓದಲು ಕಳುಹಿಸುತ್ತೇವೆ. ಅಧಿಕಾರಿಗಳಾಗಲು ಸಿದ್ಧವಾಗುತ್ತಿರುವ ವರಗಳು 16 ಲಕ್ಷದ ತನಕ ವರದಕ್ಷಿಣೆ ಕೇಳುತ್ತಾರೆ. ಅವರು ಮುಂದೆ ಆ ಹುದ್ದೆಗೆ ಅರ್ಹರಾಗುತ್ತಾರೊ ಇಲ್ಲವೊ ಅದು ಇಲ್ಲಿ ಮುಖ್ಯವಲ್ಲ".

14 ವರ್ಷದ ಕಲ್ಪನಳ ತಂದೆ ಶಿಕ್ಷಕನಾಗಲು ಓದುತ್ತಿರುವ ಗೋಗಾಚಿಯ ಹುಡುಗನಿಗೆ ತನ್ನ ಮಗಳನ್ನು ಕೊಡಲು 3 ಲಕ್ಷ ವರದಕ್ಷಿಣೆ ಕೊಡಬೇಕಾಯಿತು. ಮದುವೆಯಾಗಿ 7 ತಿಂಗಳು ಕಳೆದಿರುವ ಗರ್ಭಿಣಿ ಕಲ್ಪನಳ ಗಂಡ ಏನೂ ಕೆಲಸ ಮಾಡುತ್ತಿಲ್ಲ. "ಅವರು ಒಂದು ಪೈಸಾ ದುಡಿಯುತ್ತಿಲ್ಲ. ನಮಗೆ ಸಾಕಷ್ಟು ಭೂಮಿಯು ಇಲ್ಲ. ಆದ್ದರಿಂದ ನನಗೆ ಹೆಣ್ಣು ಮಗುವನ್ನು ಸಾಕಲು ಸಾಧ್ಯವಿಲ್ಲ" ಎನ್ನುತ್ತಾಳೆ ಕಲ್ಪನ. ಕಲ್ಪನ ಪಾಟ್ನಾಗೆ ಹೋಗಿ ಎಂತ ಮಗು ಎಂದು ಪರೀಕ್ಷಿಸಿಕೊಳ್ಳಲು ಯೋಚಿಸಿದ್ದಾಳೆ.

45 ವರ್ಷದ ರಂಗಿನ ದೇವಿಗೆ ಒಂದು ಗಂಡು ಮಗು ಇದೆ. ಎರಡು ಹೆಣ್ಣುಮಕ್ಕಳು ಹುಟ್ಟಿದ ಒಂದು ಗಂಟೆ

ಯಲ್ಲೆ ಸತ್ತು ಹೋದವು ಎಂದು ಮೆಲುದನಿಯಲ್ಲಿ ಹೇಳುತ್ತಾಳೆ.

ಗೋಗಾಚಿಯಲ್ಲಿ ಹೆಣ್ಣು ಶಿಶುಹತ್ಯೆಯನ್ನು ಯಾರು ಒಪ್ಪಿಕೊಳ್ಳುವುದಿಲ್ಲ. ಗೋಗಾಚಿಯು ಆಧುನಿಕ ಹಳ್ಳಿ ಎಂದು ಹೇಳುತ್ತಾರೆ. "ನಾವು ಯಾಕೆ ಕೊಳಕು ದಾಯಿಗಳ ಕೈಯಲ್ಲಿ ಹೆಣ್ಣುಮಕ್ಕಳನ್ನು ಸಾಯಿಸಿಸಬೇಕು. ಅದಕ್ಕಿಂತ ನಾವೆ ಕ್ಲಿನಿಕ್‌ಗಳಿಗೆ ಹೋಗುವುದು ಒಳ್ಳೆಯದಲ್ಲವಾ? ಎಂದು ಕೇಳುತ್ತಾಳೆ ರಂಗಿನ.

ಮೂಲ ತನಿಖಾ ವರದಿ : ಸೋಮುವಾಧ್ಯ - ಕಾತಿಹಾರ. Out look - 18, 1995.

ಅನುವಾದ : ಹೇಮಲತ ಹೆಚ್.ಎಂ.

## ಅಗಲಿದ ಲೇಖಕಿ ಹೆಚ್. ವಿ. ಸಾವಿತ್ರಮ್ಮ

ಕನ್ನಡ ಸಾಹಿತ್ಯಕ್ಕೆ ಮಹತ್ವದ ಕೊಡುಗೆಯನ್ನಿತ್ತ ಶ್ರೀಮತಿ ಹೆಚ್.ವಿ. ಸಾವಿತ್ರಮ್ಮನವರು ಡಿಸೆಂಬರ್ 27 ರಿಂದ ನಮ್ಮಿಂದ ಮರೆಯಾದರು. ಸಾಹಿತ್ಯ ಚಟುವಟಿಕೆಗಳಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದ ಅವರಿಗೆ ನಿಧನ ಹೊಂದಿದಾಗ 82 ವರ್ಷ. ಮರಣ ಹೊಂದುವ ಹತ್ತು ದಿನದ ಮುಂಚೆಯಷ್ಟೆ ಚಾರ್ಲ್ಸ್ ಡಿಕನ್ಸನ್‌ನ 'ಡಾಂಬಿ ಅಂಡ್‌ಸನ್' ಕೃತಿಯ ಅನುವಾದವನ್ನು ಮುಗಿಸಿದ್ದ ಸಾವಿತ್ರಮ್ಮನವರು "ಇದನ್ನು ಮುಗಿಸಲೆಂದೆ ನನಗೆ ಎಕ್ಸ್‌ಟೆನ್‌ಶನ್" ಸಿಕ್ಕಿದ್ದು ಎಂದು ತಮಾಷೆ ಮಾಡಿದ್ದರಂತೆ.

ಸಣ್ಣ ಕಥೆ, ಕಾದಂಬರಿ, ಜೀವ ಚರಿತ್ರೆ, ಶಿಶು ಸಾಹಿತ್ಯ—ಹೀಗೆ ಅವರ ಸಾಹಿತ್ಯ ಕ್ಷೇತ್ರ ವಿಶಾಲವಾದದ್ದು.

ಟಾಗೂರರ ನೌಕಾಘಾತ, ಮನೆ-ಜಗತ್ತು, ಗೋರಾ, ಚಿನ್ನದ ದೋಣಿ ಇವು ಅವರ ಜನಪ್ರಿಯ ಅನುವಾದಗಳು. ಆಂಟನಿ ಚೆಕೋವ್ ಅವರ ಕೃತಿಯೊಂದರ ಅನುವಾದವಾದ 'ಮದುವಣಗಿತ್ತಿ'ಗೆ ಅವರು ಸೋವಿಯಟ್ ಲ್ಯಾಂಡ್ ನೆಹರು ಪ್ರಶಸ್ತಿ ಪಡೆದಿದ್ದರು.

'ಸೀತೆ, ರಾಮ, ರಾವಣ, ಹಾಗು 'ವಿಮುಕ್ತೆ'–ಅವರು ಬರೆದ ವಿಶಿಷ್ಟ ಕಾದಂಬರಿಗಳು. 'ನಿರಾಶ್ರಿತೆ', 'ಸರಿದ ನೆರಳು', 'ಲಕ್ಷ್ಮಿ' ಇವು ಅವರ ಕಥಾ ಸಂಕಲನಗಳು.

ಅನುಪಮ ಪ್ರಶಸ್ತಿ, ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿದ್ದ ಅವರು ಸಾಹಿತ್ಯಗೋಷ್ಠಿ, ವಿಚಾರ ಸಂಕೀರಣಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಸದಾ ಚಟುವಟಿಕೆಯಿಂದ ಇರುತ್ತಿದ್ದ ಅವರು ಯಾವ ಪ್ರಚಾರವನ್ನು ಬಯಸುತ್ತಿರಲಿಲ್ಲ.

ಸದ್ದಿಲ್ಲದೆ ಸಾಹಿತ್ಯಸೇವೆ ಸಲ್ಲಿಸಿ ಮರೆಯಾದ ಲೇಖಕಿಗೆ ಮಾನಸ ಬಳಗದ ಭಕ್ತಿಪೂರ್ವಕ ಶ್ರದ್ಧಾಂಜಲಿ.

# ವರದಕ್ಷಿಣೆ ನಿರ್ಮೂಲನೆ ಹೇಗೆ ?

ಇಂದು ವರದಕ್ಷಿಣೆ ನಮ್ಮ ದೇಶದ ಬಹು ದೊಡ್ಡ ಪಿಡುಗಾಗಿದೆ. ವರನಿಗೆ ವರವಾಗಿ ವಧುವಿಗೆ ಶಾಪವಾಗಿ ಪರಿಣಮಿಸಿದೆ. ಎಷ್ಟೋ ಜನ ಹೆಣ್ಣು ಹೆತ್ತ ಬಡವರು ಕಣ್ಣೀರು ಸುರಿಸುತ್ತಾ ಇದ್ದಾರೆ. ವರದಕ್ಷಿಣೆ ಪೂರ್ಣವಾಗಿ ಸಂದಾಯವಾಗಲಿಲ್ಲ ಎಂಬ ಕಾರಣಕ್ಕಾಗಿ ಎಷ್ಟೋ ಮುಗ್ಧ ಹೆಣ್ಣುಗಳ ಕೊಲೆಯಾಗಿದೆ. ಈಗಲೂ ಆಗುತ್ತಾ ಇವೆ. ಸರಿಯಾದ ಅರ್ಥ ಕೊಡುವುದಾದರೆ ವರದಕ್ಷಿಣೆ ಎಂಬುದು ನರಭಕ್ಷಣೆಗೆ ಸಮ.

ಹಿಂದಿನ ಕಾಲದಲ್ಲಿ ಜೀವನ ನಿರ್ವಹಣೆ ಕಷ್ಟವಾಗಿರಲಿಲ್ಲ. ವ್ಯವಸಾಯ ಅಥವಾ ಶಿಕ್ಷಕ ವೃತ್ತಿ ಅನುಸರಿಸಿ ವೈಭವದಿಂದ ಅಲ್ಲದಿದ್ದರೂ ಸುಖವಾಗಿ ಜೀವನ ನಡೆಸುತ್ತಿದ್ದರು. ಈಗಿನ ಕಾಲದ ಹಾಗೆ ಇಂಜನಿಯರು ಡಾಕ್ಟರು ಆಗಬೇಕೆಂದು ಹುಡುಕುತ್ತಿರಲಿಲ್ಲ. ಗಂಡಿನ ಗುಣ ಮತ್ತು ಅವನು ಸಂಸಾರವನ್ನು ತೂಗಿಸಬಲ್ಲನೆ ಎಂದು ನೋಡುತ್ತಿದ್ದರು. ನಿರುದ್ಯೋಗ, ಜನಸಂಖ್ಯೆ ಮತ್ತು ಬಡತನ ಹೆಚ್ಚಾದಾಗ ವರದಕ್ಷಿಣೆ ಜಾರಿಗೆ ತಂದರು. ಈ ವರದಕ್ಷಿಣೆ ಎಲ್ಲರಿಗೂ ಪೀಡೆಯಲ್ಲ. ಶ್ರೀಮಂತರು ಎಷ್ಟಾದರೂ ಕೊಡಲಿ, ತೆಗೆದುಕೊಳ್ಳಲಿ ಅದು ಲೆಕ್ಕಕ್ಕೆ ಇಲ್ಲ. ಶ್ರೀಮಂತರಿಗೆ ಹೆಚ್ಚು ವರದಕ್ಷಿಣೆ ಕೊಟ್ಟಷ್ಟು ಮತ್ತು ತೆಗೆದುಕೊಂಡಷ್ಟು ಹೆಮ್ಮೆಯ ವಿಷಯ. ಮಧ್ಯಮ ಮತ್ತು ದುರ್ಬಲ ವರ್ಗದವರಿಗೆ ಇದು ಶಾಪವಾಗಿದೆ. ಮಧ್ಯಮ ವರ್ಗದವರು ಸಾಲ ಸೋಲ ಮಾಡಿ ವರದಕ್ಷಿಣೆ ಕೊಡುತ್ತಾರೆ. ಆದರೂ ಅದು ಸಾಲದೆ ಅವಳನ್ನು ಹಿಂಸಿಸುತ್ತಾರೆ. ಕೊನೆಗೆ ಅವಳು ಆತ್ಮಹತ್ಯೆಗೆ ಶರಣಾಗುತ್ತಾಳೆ. ಅಥವಾ ಅವಳನ್ನು ಕೊಲ್ಲುತ್ತಾರೆ. ಬರೇ ಹೆಣ್ಣುಮಕ್ಕಳಿದ್ದರೆ ಅವರ ಸ್ಥಿತಿ ಶೋಚನೀಯ. ಗಂಡು ಮಕ್ಕಳಿದ್ದರೆ ಹೆಣ್ಣಿಗೆ ಕೊಟ್ಟಿದ್ದನ್ನು ಗಂಡಿನ ಮೂಲಕ ಪಡೆಯುತ್ತಾರೆ. ಹೀಗಾಗಿ ವರದಕ್ಷಿಣೆ ಕೊಡು ಪಡೆಯುವ ವ್ಯವಹಾರವಾಗಿದೆ. ಈಗಲೂ ವರದಕ್ಷಿಣೆ ಪಡೆಯದವರಿದ್ದಾರೆ. ತೆಗೆದುಕೊಳ್ಳುವವರು ೭೫% ಆದರೆ ಪಡೆಯದವರು ಶೇಕಡಾ ೨೫ರಷ್ಟು. ಈಗ ವರದಕ್ಷಿಣೆ ಎಲ್ಲಿವರೆಗೆ ಮುಂದುವರೆದಿದೆ ಎಂದರೆ ವರದಕ್ಷಿಣೆ ಇಲ್ಲದೆ ಸರಳವಾಗಿ ವಿವಾಹವಾಗಲು ಮುಂದೆ ಬಂದರೆ ಆ ಹುಡುಗನಲ್ಲಿ ಏನೋ ಐಬಿರಬೇಕೆಂದು ಹೆಣ್ಣು ಹೆತ್ತವರೆ ಹೇಳುವಂತ ಪರಿಸ್ಥಿತಿ ಬಂದಿದೆ.

ಇಂದು ಯಾವ ಹುದ್ದೆಯೂ ಯೋಗ್ಯತೆ, ಅರ್ಹತೆಗನುಗುಣವಾಗಿ ದೊರೆಯುವುದಿಲ್ಲ. ಪ್ರಭಾವಿತರ ಪತ್ರ ಕೈಯಲ್ಲಿ ಕಾಸಿದ್ದರೆ ಉದ್ಯೋಗವನ್ನು ಕೊಂಡುಕೊಳ್ಳಬಹುದು. ಆದ್ದರಿಂದ ಮಧ್ಯಮ ಮತ್ತು ದುರ್ಬಲ ವರ್ಗದವರು ವರದಕ್ಷಿಣೆ ಅನಿವಾರ್ಯ ಎಂದು ತಿಳಿಯುತ್ತಾರೆ. ವಧುವಿನ ದೃಷ್ಟಿಯಲ್ಲಿ ವರದಕ್ಷಿಣೆಯು ಆಯಾಯ ವರ್ಗಕ್ಕನುಗುಣವಾಗಿ ಭಾವನೆಗಳಿರಬಹುದು. ಶ್ರೀಮಂತ ವರ್ಗದ ಹೆಣ್ಣು ವರದಕ್ಷಿಣೆ ತನ್ನ ತಂದೆಯ ಆಸ್ತಿಯ ಒಂದು ಪಾಲು ಎಂದು ತಿಳಿದರೆ ಮಧ್ಯಮ ವರ್ಗದ ಹೆಣ್ಣು ಒಳ್ಳೆಯ ಗಂಡನನ್ನು ಪಡೆಯಲು ವರದಕ್ಷಿಣೆ ಅನಿವಾರ್ಯವಾಗಿ ಕೊಡಬೇಕಾದ ಶುಲ್ಕ ಎಂದು ತಿಳಿಯುತ್ತಾಳೆ. ದುರ್ಬಲ ವರ್ಗಕ್ಕೆ ಇದೊಂದು ಕಾಟ. ವರದಕ್ಷಿಣೆ ನಿರ್ಮೂಲನೆ ಹೇಗೆ? ಅದು ನಿರ್ಮೂಲವಾಗಬೇಕಾದರೆ ಎಲ್ಲರಿಗೂ ನೆಮ್ಮದಿ ಜೀವನ ನಡೆಸಲು ಕಲ್ಪಿಸಬೇಕು. ವರದಕ್ಷಿಣೆಯಿಂದಲೇ ಉದ್ಯೋಗ ದೊರಕಿಸಿಕೊಳ್ಳುವ, ಮನೆ ಮಾಡಿಕೊಳ್ಳುವ ಪರಿಸ್ಥಿತಿ ಉಂಟಾಗಬಾರದು. ಸರ್ಕಾರವು ಅರ್ಹತೆಗನುಸಾರ ಉದ್ಯೋಗ ಕಲ್ಪಿಸಬೇಕು. ಮನೆಗಳನ್ನು ಕಟ್ಟಲು ಕಂತುಗಳಲ್ಲಿ ಸಾಲ, ವ್ಯವಸಾಯವನ್ನು ಲಾಭದಾಯಕಗೊಳಿಸಲು ಉತ್ತಮ ಪರಿಸರ, ನೀರಿನ ಸೌಲಭ್ಯ ಒದಗಿಸಬೇಕು. ರೈತರ ಬೆಳೆಗೆ ಯೋಗ್ಯ ಬೆಲೆ ಸಿಗುವಂತೆ ನೋಡಬೇಕು. ಸರ್ಕಾರಿ ಅಧಿಕಾರಿಗಳು ಬಾಯಿಂದ ಆಶ್ವಾಸನೆ ಕೊಡದೆ ಕಾರ್ಯದಿಂದ ಮಾಡಿ ತೋರಿಸಬೇಕು. ವರದಕ್ಷಿಣೆ ಕಾನೂನನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು. ಆಗ ವರದಕ್ಷಿಣೆಯನ್ನು ನಿರ್ಮೂಲಗೊಳಿಸಬಹುದು. ಗಂಡುಗಳು ವರದಕ್ಷಿಣೆ ಪಡೆದರೆ ತನ್ನನ್ನು ಅವರು ಕೊಂಡು ಕೊಂಡಂತೆ (ಕ್ರಯಕ್ಕೆ) ಎಂದು ತಿಳಿದು ಆತ್ಮಾಭಿಮಾನದಿಂದ ವರದಕ್ಷಿಣೆ ಪಡೆಯದೆ ಮದುವೆಯಾಗುತ್ತೇನೆ ಎಂದು ಪ್ರತಿಜ್ಞೆ ಮಾಡಬೇಕು. ಎಲ್ಲಾ ಹೆಣ್ಣುಮಕ್ಕಳು ವರದಕ್ಷಿಣೆ ಪಡೆಯದವರನ್ನು ಮಾತ್ರ ವರಿಸುತ್ತೇವೆ ಎಂದು ಮನಸ್ಸು ಮಾಡಿದರೆ ಮತ್ತು ಅದರಂತೆ ನಡೆದರೆ ವರದಕ್ಷಿಣೆಯನ್ನು ಬೇರು ಸಮೇತ ಕಿತ್ತೊಗೆಯಬಹುದು. ಹೆತ್ತ ತಂದೆ ತಾಯಿಗಳು ವರದಕ್ಷಿಣೆ ಪಡೆಯದೆ ಮತ್ತು ಕೊಡದೆ ಮುಂದುವರಿದರೆ ವರದಕ್ಷಿಣೆ ಪದ್ಧತಿ ನಿಲ್ಲಬಹುದು.

—ಜಿ.ಎ. ರುಕ್ಮಿಣಿಮಾಲಾ

# ಕೆಲಸದ ಹಕ್ಕಿಗಾಗಿ ಸಾಥಿನರ ಹೋರಾಟ

ಭಾನ್ವರಿದೇವಿಗಾದ ಅನ್ಯಾಯದ ವಿರುದ್ಧ ದೇಶದಾದ್ಯಂತ ಮಹಿಳಾ ಚಳವಳಿ ತನ್ನ ಪ್ರತಿಭಟನೆಯನ್ನು ತೀವ್ರಗೊಳಿಸುತ್ತಿರುವಾಗಲೇ, ಆಕೆಯಂತಹ ಸಾವಿರಾರು ಸಾಥಿನರು ಕನಿಷ್ಟ ಕೂಲಿಗಾಗಿ. ಕೆಲಸದ ಭದ್ರತೆಗಾಗಿ ನಡೆಸುತ್ತಿರುವ ಹೋರಾಟ ಕೂಡ ತೀವ್ರಗೊಂಡು 'ಮಹಿಳಾ ಸಶಕ್ತತೆ ಕಾರ್ಯಕ್ರಮ'ದ ಮುಸುಕಿನಡಿಯಲ್ಲಿನ ಇನ್ನೂ ಎಷ್ಟೋ ವಿಪರ್ಯಾಸಗಳನ್ನು, ವ್ಯಂಗ್ಯಗಳನ್ನು ಹೊರಗೆಳೆಯುತಿದೆ. ಆರನೆಯ ಪಂಚವಾರ್ಷಿಕ ಯೋಜನೆಯ ವೇಳೆಗೆ **ಮಹಿಳಾ ಕಲ್ಯಾಣ ಕಾರ್ಯಕ್ರಮಗಳು ಮಹಿಳಾ ಅಭಿವೃದ್ಧಿ ಕಾರ್ಯಕ್ರಮ**ಗಳಾಗಿ ಪರಿವರ್ತಿತಗೊಂಡಾಗ ಮೊಟ್ಟಮೊದಲನೆಯದಾಗಿ ಹುಟ್ಟಿಕೊಂಡದ್ದೇ ರಾಜಸ್ತಾನದ 'ಮಹಿಳಾ ಅಭಿವೃದ್ಧಿ ಕಾರ್ಯಕ್ರಮ'—WDP. ಮಹಿಳಾ ಚಳವಳಿಯ ಪರಿಭಾಷೆಯನ್ನೇ ಬಳಸಿಕೊಂಡು ಸ್ವಯಂ ಸೇವೆಯ ಹೆಸರಲ್ಲಿ ಮಹಿಳಾ ಕೆಲಸಗಾರರ ಕೆಲಸದ ಹಕ್ಕನ್ನೇ ಸಂಪೂರ್ಣ ನುಚ್ಚು ನೂರಾಗಿಸಿದ ಇಲ್ಲಿನ ಕ್ರೂರ ವಿಪರ್ಯಾಸವನ್ನು ಕುರಿತು ಈ ಹಿಂದೆಯೇ 'ಮಾನಸ'ದಲ್ಲಿ ಬರೆಯಲಾಗಿದೆ. (ಅಭಿವೃದ್ಧಿ ? ಯಾರಿಗಾಗಿ ?—ಜ–1995). ಭಾರತದ ಸ್ವಾಯತ್ತ ಮಹಿಳಾ ಗುಂಪುಗಳು ಕೈಗೊಂಡ ಈ ಸತ್ಯಶೋಧನಾ ಕ್ರಿಯೆಯ ನಂತರ ಚುರುಕುಗೊಂಡ ಸಾಥಿನರ ಹೋರಾಟ ಈಗ ಒಂದು ನಿರ್ದಿಷ್ಟ ಘಟ್ಟ ತಲುಪಿದೆ. ಸಾಥಿನಳ ಹುದ್ದೆ (ಸ್ವಯಂಸೇವಾ ಸ್ವರೂಪದ್ದು)ಯನ್ನು ಮುಂದುವರೆಸುವ ಬಿಡುವ ಮತ್ತು ಆಕೆಯ ಗೌರವಧನವನ್ನು ಹೆಚ್ಚಿಸುವ ಬಗ್ಗೆ ಸೂಕ್ತ ನಿರ್ಧಾರ ಕೈಗೊಳ್ಳಲು ಸರ್ಕಾರವನ್ನು ಸಾಧ್ಯವಾಗಿಸಲು ಇದೀಗ National Commission for Women ಒಂದು ಅಧ್ಯಯನಕ್ಕೆ ಅನುವು ಮಾಡಿಕೊಟ್ಟಿದೆ. ಸರ್ಕಾರದ ಯಾವತ್ತೂ ಕಾರ್ಯವೈಖರಿಯ ಮಾದರಿಯ ಬೆಳಕಿನಲ್ಲಿ ಈ ನಿಲುವು ಕೂಡ. ಸಾಥಿನರನ್ನು "ಕುತ್ತಿಗೆಯ ಮೇಲೆ ಕತ್ತಿ ನೇತಾಡುವ" ಸ್ಥಿತಿಯಲ್ಲೇ ಮುಂದುವರೆಸಿದೆ.

WDP ಯಂತಹ ಸರ್ಕಾರಿ ಪೋಷಿತ 'ಮಹಿಳಾ ಸಶಕ್ತತಾ' ಕಾರ್ಯಕ್ರಮಗಳು ಕರ್ನಾಟಕವನ್ನು ಒಳಗೊಂಡಂತೆ ಐದು ರಾಜ್ಯಗಳ 30ಕ್ಕೂ ಮಿಕ್ಕು ಜಿಲ್ಲೆಗಳಲ್ಲಿ ಕಾರ್ಯಾಚರಣೆಯಲ್ಲಿದ್ದು, ಸಾಥಿನರಂತಹದೇ ಸ್ಥಿತಿಯಲ್ಲಿ ದುಡಿಯುವ ಸಹಯೋಗಿನಿಯರು, ಬಿಟ್ಟಿ ದುಡಿಯುವ ಸಹಾಯಕಿಯರು, ಟೋಕನ್ ಗೌರವಧನದಲ್ಲಿ ದುಡಿಯುವ ಕ್ರೆಶ್ ಕೆಲಸಗಾರ್ತಿಯರು ಸಾವಿರ–ಸಾವಿರಗಟ್ಟಲೆಯಲ್ಲಿ ದಿನನಿತ್ಯದ ಕೆಲಸದ ಬದುಕನ್ನು ತೀವ್ರ ಅಭದ್ರತೆ, ಅಪಾಯಗಳಲ್ಲಿ ಕಳೆಯುತ್ತಿರುವಾಗ ಸಾಥಿನರ ಕೆಲಸದ ಹಕ್ಕಿಗಾಗಿನ ಹೋರಾಟ ಇಲ್ಲಿ ಒಂದು ದಾರಿದೀಪವಾಗಬಲ್ಲುದು. ಮುಖ್ಯವಾಗಿ ಈ ದೃಷ್ಟಿಯಿಂದ 91ರ ನಂತರದ ಸಾಥಿನರ ಹೋರಾಟ ನಡೆದು ಬಂದ ದಾರಿಯನ್ನು ಇಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ.

WDPಯ ಕಾರ್ಯ ಚಟುವಟಿಕೆಗಳಲ್ಲಿ ಬದಲಾವಣೆಯಾಗುತ್ತಾ ಬಂದ ಹಾಗೆ ವಿವಿಧ ಸ್ತರಗಳ ಅಧಿಕಾರಿಣಿಯರ ಹಿಡಿತ ಬಲಗೊಳ್ಳತೊಡಗಿತು. ಇಲ್ಲಿಂದಲೇ ಪ್ರಾರಂಭವಾದದ್ದು ಸಾಥಿನರ ಪ್ರತಿಭಟನೆ. ಮತ್ತು ತಮ್ಮ ಘನತೆ–ಹಕ್ಕುಗಳ ಪ್ರತಿಪಾದನೆಗಾಗಿ ಯೂನಿಯನ್ ಕಟ್ಟಿಕೊಳ್ಳಬೇಕೆಂಬ ನಿರ್ಧಾರ. 1991ರಲ್ಲಿ ಕ್ಯಾಲಿಕಟ್‌ನಲ್ಲಿ ನಡೆದ ರಾಷ್ಟ್ರ ಮಹಿಳಾ ಸಮಾವೇಶದಲ್ಲಿ ಪ್ರತ್ಯೇಕ ಬ್ಯಾನರಿನಡಿ ಭಾಗವಹಿಸಿದರೆಂಬ ಆರೋಪದ ಮೇಲೆ 5 ಜನ ಸಾಥಿನರನ್ನು ಕೆಲಸದಿಂದ ತೆಗದಾಗ ಈ ಪ್ರತಿಭಟನೆ ಸ್ಪಷ್ಟ ದನಿ ಪಡಕೊಂಡಿತು. ಯೂನಿಯನ್ ಕಟ್ಟಿಕೊಳ್ಳುವ ನಿರ್ಧಾರವನ್ನು ಅಧಿಕೃತವಾಗಿ ಘೋಷಿಸಲಾಯಿತು. 1993ರ ಜನವರಿ ವೇಳೆಗೆ ಸಾಥಿನರ ಯೂನಿಯನ್ ನೋಂದಣಿಗೊಂಡು ಅದೇ ವರ್ಷದ ಜುಲೈನಲ್ಲಿ ಯೂನಿಯನ್ನು ತನ್ನ ಮೊಟ್ಟಮೊದಲ ರಾಜ್ಯ ಸಮಾವೇಶ ನಡೆಸಿತು. ಸ್ವಾಯತ್ತ ಮಹಿಳಾ ಗುಂಪುಗಳು, ವಿವಿಧ ರಾಜ್ಯ ಮತ್ತು ರಾಷ್ಟ್ರ ಮಟ್ಟದ ಕಾರ್ಮಿಕ ಸಂಘಟನೆಗಳು ಇದರ ಸಂಯೋಜನೆಯಲ್ಲಿ ಕೈಗೂಡಿಸಿದವು. ಇದೇ ಸಮಾವೇಶದಲ್ಲಿ ಹನ್ನೊಂದು ಅಂಶಗಳ ಬೇಡಿಕೆಯನ್ನು ಹೊರತರ

ಲಾಯಿತು. ಈ ಬೇಡಿಕೆಗಳನ್ನು ವಿವಿಧ ಜಿಲ್ಲೆಗಳ ಕಲೆಕ್ಟರುಗಳ ಮೂಲಕ ರಾಜಸ್ತಾನ ಸರ್ಕಾರಕ್ಕೆ ತಲುಪಿಸಲಾಯಿತು. ರಾಜ್ಯದಾದ್ಯಂತ ಬೇಡಿಕೆಗಳ ಈಡೇರಿಕೆಗಾಗಿ ಹರತಾಳ ನಡೆಸುವ ತೀರ್ಮಾನವನ್ನು ರಾಜ್ಯ ಸಮಾವೇಶ ಘೋಷಿಸಿತು. ಅಂತೆಯೇ 1993ರ ಸೆಪ್ಟೆಂಬರ್‌ನಿಂದ ಡಿಸೆಂಬರ್ ಕೊನೆಯ ವೇಳೆಗೆ ಬೇರೆ ಬೇರೆ ಜಿಲ್ಲೆಗಳಲ್ಲಿ ಅನೇಕ ಧರಣಿ ಸತ್ಯಾಗ್ರಹಗಳು ನಡೆದವು. ಇದೇ ಸಮಯದಲ್ಲಿ ಮೇಲಧಿಕಾರಿಣಿಯವರಿಂದ–ಸಾಥಿನರಿಗೆ ಆಗುತ್ತಿರುವ ಕಿರುಕುಳದ ಬಗ್ಗೆ ಕೂಲಂಕುಶ ಪರಿಶೀಲನೆ ನಡೆಸಿ ಅನೇಕ ಪ್ರಕರಣಗಳನ್ನು ಹೊರಗೆಳೆಯಲಾಯಿತು. ಅಜಮೀರ ಜಿಲ್ಲೆಯ ಫತೇಪುರ್‌ನ ಸಾಥಿನರೊಬ್ಬರು ಮಾನಸಿಕ ಸ್ಥಿಮಿತ ಕಳಕೊಂಡು ಹುಚ್ಚಿಯಂತಾದದ್ದು ಇಂತಹ ಕಿರುಕುಳದಿಂದ.

1994ರ ಜನವರಿಯಲ್ಲಿ ಸಾಥಿನ್ ಯೂನಿಯನ್ನಿನ ಪ್ರತಿನಿಧಿಗಳು ರಾಜಸ್ತಾನದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರನ್ನು, National Commission for Women ದ ಸದಸ್ಯರನ್ನು, ರಾಜಸ್ತಾನದ ಮುಖ್ಯಮಂತ್ರಿಗಳನ್ನು ಕಂಡು ತಮ್ಮ ಅಹವಾಲು ಸಲ್ಲಿಸಿದರು. 1994ರ ಮಾರ್ಚ್ ವೇಳೆಗೆ ಯೂನಿಯನ್ ರಾಜಸ್ತಾನದ ವಿವಿಧ ಜಿಲ್ಲೆಗಳ 100ಕ್ಕೂ ಹೆಚ್ಚು ಎಂ.ಎಲ್.ಎ. ಗಳನ್ನು ಭೆಟ್ಟಿಯಾಗಿ ಸಾಥಿನರ ಸ್ಥಿತಿಗತಿಗಳನ್ನು ಅವರ ಗಮನಕ್ಕೆ ತರಲು ಪ್ರಯತ್ನಿಸಿತು. ಇದೇ ವರ್ಷ ಏಪ್ರಿಲ್ ನಲ್ಲಿ ವಿಧಾನಸಭೆಯ ಮುಂದೆ ಒಂದು ದಿನದ ಧರಣಿ ನಡೆಸಿ ಸಾಥಿನರು ತಮ್ಮ ಬೇಡಿಕೆಗಳ ಈಡೇರಿಕೆಗಾಗಿ ಒತ್ತಾಯ ತಂದರು. ಅದೇ ದಿನ ಮುಖ್ಯಮಂತ್ರಿ ಬೈರಾನ್ ಸಿಂಘ್ ಶಕಾವತರನ್ನು ಕಂಡು ಅಹವಾಲು ಸಲ್ಲಿಸಿದಾಗ ಮುಖ್ಯಮಂತ್ರಿಗಳು ತಾವು ಸಾಥಿನರ ಬೇಡಿಕೆಗಳನ್ನು ಪರಿಶೀಲಿಸಿ ಅವರ ಗೌರವಧನವನ್ನು ಆದಷ್ಟು ಬೇಗ ಹೆಚ್ಚಿಸುವುದಾಗಿ ಭರವಸೆ ನೀಡಿದರು. ಮಾರ್ಚ್ ತಿಂಗಳಲ್ಲಿ ಅಂತರ ರಾಷ್ಟ್ರೀಯ ಮಹಿಳಾ ದಿನಾಚರಣೆಯ ಅಂಗವಾಗಿ ಸಾಥಿನರು 'ಶಕ್ತಿಮೇಳ'ದಲ್ಲಿ ಪುನಃ ತಮ್ಮ ಬೇಡಿಕೆಗಳನ್ನು ಎತ್ತಿ ಹಿಡಿದರು. WDPಯ ಬೇರೆ ಬೇರೆ ಜಿಲ್ಲೆಗಳ ಕಾರ್ಯಕ್ರಮ ನಿರ್ದೇಶಕರುಗಳು ಇದಕ್ಕೆ ಪ್ರತಿಕ್ರಿಯಿಸಿ ಕಾರ್ಯಕ್ರಮವನ್ನು ಇನ್ನೂ ವಿಸ್ತಾರಗೊಳಿಸುವುದಾಗಿಯೂ, ಸಾಥಿನರನ್ನು ಕೆಲಸದಿಂದ ತೆಗೆಯುವ ಯಾವುದೇ ಉದ್ದೇಶವೂ ಇಲ್ಲವೆಂದೂ, ಬಹು ಬೇಗದಲ್ಲೇ ಸಾಥಿನರ ಗೌರವಧನವನ್ನು 500 ರೂ.ಗಳಿಗೆ ಹೆಚ್ಚಿಸುವ ಯೋಚನೆ ಸರ್ಕಾರಕ್ಕಿದೆಯೆಂದೂ ತುಂಬು ಆಶ್ವಾಸನೆ ನೀಡಿದರು.

ಅಲ್ಲಿಂದಾಚೆಗೆ ಸಾಥಿನರೊಂದಿಗೆ ನಿರಂತರವಾಗಿ ಕಣ್ಣುಮುಚ್ಚಾಲೆಯಾಡುತ್ತಲೇ ಬಂದ ಸರ್ಕಾರ 1995ರ ಜನವರಿಯಲ್ಲಿ ಐದು ವರ್ಷದ ಸೇವೆಯನ್ನು ಪೂರ್ತಿಗೊಳಿಸಿರುವ ಸಾಥಿನರನ್ನು ಕೆಲಸದಿಂದ ತೆಗೆಯಬೇಕೆಂಬ ಆದೇಶವನ್ನು ಹೊರಡಿಸಿತು. 1984ರಿಂದಲೂ ಸೇವೆ ಸಲ್ಲಿಸುತ್ತಾ ಬಂದು ಇದೀಗ ತಮ್ಮ ಕೆಲಸದ ಸ್ಥಿತಿಗತಿಯ ಸುಧಾರಣೆಗೆ ಒತ್ತಾಯ ತರುತ್ತಿರುವ ಹಿರಿಯ ಸಾಥಿನರನ್ನೆಲ್ಲಾ ಒಮ್ಮೆಗೇ ತೆಗೆದುಬಿಡುವುದರಿಂದ ಅವರ ಹೋರಾಟಕ್ಕೊಂದು ಶಾಶ್ವತ ಪರದೆ ಎಳೆದುಬಿಡುವುದು ಸರ್ಕಾರದ ಹುನ್ನಾರವಾಗಿದ್ದಿತು. ಇದರ ಜತೆಗೆಯೇ 1) ಇನ್ನು ಮುಂದೆ ಎಲ್ಲ ಸಾಥಿನರ ಸೇವೆಯು ಕೇವಲ ಐದು ವರ್ಷ ಕಾಲಾವಧಿಯದ್ದು ಮಾತ್ರವಾಗಿರುತ್ತದೆ. 2) ಸಾಥಿನರ ನೇಮಕಾತಿಗೆ ನಿರ್ದಿಷ್ಟ ವಯೋಮಿತಿ ಇರುತ್ತದೆ ಮತ್ತು 3) ಸಾಥಿನರಿಗೆ ಸಿಗುತ್ತಿರುವ ಗೌರವಧನವನ್ನು ಇನ್ನು ಮುಂದೆ ಮಹಿಳಾ ಸಮೂಹ (ಸಂಘಗಳಿ ಕೊಡಲಾಗುತ್ತದೆ), (ಇದು ಕರ್ನಾಟಕದ 'ಮಹಿಳಾ ಸಮಖ್ಯಾ'ದ ಮಾದರಿ. ಇಲ್ಲಿ ಸಾಥಿನರ ಕೆಲಸವನ್ನು ಮಾಡುವ 'ಸಹಾಯಕಿ'ಯರ ಗೌರವಧನವನ್ನು ಸಂಘಕ್ಕೇ ಕೊಡಲಾಗುತ್ತದೆ), ಎಂಬಂತಹ ತೀರ್ಮಾನಗಳನ್ನು ಹೊರಡಿಸಲಾಯಿತು.

ಸರ್ಕಾರದ ಈ ತೀರ್ಮಾನಗಳನ್ನು ಅತ್ಯಂತ ತೀವ್ರವಾಗಿ ಪ್ರತಿಭಟಿಸಿದ ಸಾಥಿನರಿಗೆ ದೇಶದಾದ್ಯಂತ ಸಂಪೂರ್ಣ ಬೆಂಬಲ ದೊರೆಯಿತು ಜನಾಂದೋಲನಗಳಿಂದ. ಈ ವೇಳೆಗಾಗಲೇ ದೆಹಲಿಯಲ್ಲಿ "ಸಾಥಿನ ಸಂಘರ್ಷ ಸಮರ್ಥನ ಸಮಿತಿ" ಎಂಬ ಹೆಸರಿನಲ್ಲಿ ರೂಪುಗೊಂಡ ಸ್ವಾಯತ್ತ ಮಹಿಳಾ ಸಂಘಟನೆಗಳು, ಕಾರ್ಮಿಕ ಸಂಘಟನೆಗಳು, ಮಜದೂರ ಸಂಘಟನೆಗಳು ಹೀಗೆ ಒಟ್ಟು 22 ಜನಪರ ಸಂಘಟನೆಗಳ ಸಮಿತಿಯು ಜ್ಞಾಪನಾ ಪತ್ರವನ್ನು ಹೊರಡಿಸಿತು. 1) ಸಾಥಿನರನ್ನು ಕೆಲಸದಿಂದ ತೆಗೆಯುವ ತೀರ್ಮಾನವನ್ನು ಸರ್ಕಾರ ಈಗಿಂದೀಗಲೇ ಹಿಂತೆಗೆದುಕೊಳ್ಳಬೇಕು. 2) ಸಾಥಿನರ ಹುದ್ದೆಯನ್ನು ನಿಯಮಿತಗೊಳಿಸಿ ಖಾಯಂಗೊಳಿಸಬೇಕು. 3) ಸಾಥಿನರನ್ನು ಕೆಲಸಗಾರರೆಂದು ಪರಿಗಣಿಸಿ ಅವರಿಗೆ ಕನಿಷ್ಠ ಕೂಲಿ

ಯನ್ನು ಕೊಡಬೇಕು. ಅವರ ಕೆಲಸದ ಸ್ಥಿತಿಗತಿಯನ್ನು ಉತ್ತಮಗೊಳಿಸಿ ಅವರ ಭದ್ರತೆಗಾಗಿ ಸೂಕ್ತ ಕ್ರಮ ಕೈಗೊಳ್ಳಬೇಕು ಎಂದು ಬಲವಾಗಿ ಒತ್ತಾಯಿಸಿತು. 'ಕರ್ನಾಟಕ ಮಹಿಳಾ ಸಮಖ್ಯಾ ಕೆಲಸಗಾರರ ಅಸೋಸಿಯೇಷನ್' ಈ ಸಮಯದಲ್ಲಿ ಸಾಥಿನ್ ಯೂನಿಯನ್‌ಗೊಂದು ಸಂದೇಶ ಕಳಿಸಿ ಸಾಥಿನ್‌ರಂತಹದ್ದೇ ಪರಿಸ್ಥಿತಿಗೆ ಎದುರಾಗಿರುವ ತಾವು ಸಾಥಿನರ ಹೋರಾಟಕ್ಕೆ ಸಂಪೂರ್ಣ ಬೆಂಬಲ ಸೂಚಿಸುವುದಾಗಿ ತಿಳಿಸಿತು. ಸಾಥಿನರ ಹತ್ತಿ ಉರಿಯುವ ಪ್ರತಿಭಟನೆಯನ್ನು ಹೇಗೂ ನಂದಿಸಲಾರದ ಸರ್ಕಾರ ಅವರನ್ನು ಕೆಲಸದಿಂದ ತೆಗೆಯುವ ತನ್ನ ನಿರ್ಧಾರವನ್ನು ಕೊನೆಗೂ ಕೈ ಬಿಡಬೇಕಾಯಿತು. ಇದೀಗ 'National Commission' for Women ನೇಮಿಸಿರುವ ಅಧ್ಯಯನ! ಈ ಸಂದರ್ಭದಲ್ಲಿ ದೆಹಲಿಯಲ್ಲಿ ರೂಪುಗೊಂಡಿರುವ ಈ ಹಿಂದೆ ಹೇಳಲಾದ ಸಾಥಿನ್ ಸಂಘರ್ಷ ಸಮರ್ಥನ ಸಮಿತಿ ಒಂದು ಹೇಳಿಕೆಯನ್ನು ಹೊರಡಿಸಿ ಸಾಥಿನರ ಇಂದಿನ ಸ್ಥಿತಿಗತಿಗೆ ಸಂಬಂಧಿಸಿದಂತೆ ಈ ಕೆಳಕಂಡ ಅಂಶಗಳನ್ನು 'National Commission for Women'ನ ಗಮನಕ್ಕೆ ತರುತ್ತಾ ನ್ಯಾಯಯುತವಾದ ರೀತಿಯಲ್ಲಿ ಸಾಥಿನರ ಬೇಡಿಕೆಗಳನ್ನು ಪೂರೈಸಬೇಕೆಂದು ಕೇಳಿಕೊಂಡಿದೆ.

1. ಸಾಥಿನರಿಗೆ ಕನಿಷ್ಟ ಕೂಲಿ ಸಿಗುತ್ತಿಲ್ಲ. ಅವರು ಸ್ವಯಂಸೇವಕರಾಗಿಯೇ ಕಳೆದ 10 ವರ್ಷಗಳಿಂದ ಹಗಲಿರುಳು ದುಡಿಯುತ್ತಿದ್ದಾರೆ. ಇಂದು ಸಾಥಿನರಿಗೆ ದೊರೆಯುತ್ತಿರುವ ಹಣ ಕಡು ಬಡತನದ ಕೂಲಿಯ ಅರ್ಧದಷ್ಟಿದೆ.

2. ಅವರ ಸೇವೆ ಯಾವುದೇ ಕಾನೂನು-ಕಟ್ಟಳೆಗೆ ಒಳಪಡುವುದಿಲ್ಲ. ರಾಜಸ್ತಾನ ಹೈಕೋರ್ಟು ತನ್ನ ತೀರ್ಪೊಂದರಲ್ಲಿ ಸೂಕ್ತ ನಿಯಮಗಳನ್ನು ರೂಪಿಸಬೇಕೆಂದು ಹೇಳಿದ್ದರೂ ಅದು ಜಾರಿಯಾಗಿಲ್ಲ. WDPಯನ್ನು ಸರ್ಕಾರಿ ಕಾರ್ಯಕ್ರಮವೆಂದು ಪರಿಗಣಿಸಬೇಕು, ಮತ್ತು ಇದರಡಿ ಕೆಲಸ ಮಾಡುವ ಪ್ರತಿ ಕೆಲಸಗಾರ್ತಿಗೂ ಕೊನೆಪಕ್ಷ ಕನಿಷ್ಟ ಕೂಲಿ ನೀಡಬೇಕು, ಸೂಕ್ತ ಕೆಲಸದ ಪರಿಸರ ಒದಗಿಸಬೇಕು, ನೇಮಕಾತಿ ಮತ್ತು ವಜಾಗಳಿಗೆ ಸಂಬಂಧಿಸಿದ ನ್ಯಾಯಯುತ ಕಾನೂನು– ಕಟ್ಟಳೆ ರೂಪಿಸಬೇಕು.

3. ರಾಜಸ್ತಾನ ಸರ್ಕಾರವು ಪದೇ ಪದೇ ವೈರುಧ್ಯವುಳ್ಳ ಹೇಳಿಕೆಗಳನ್ನು ಕೊಡುತ್ತಾ ಸಾಥಿನರನ್ನು ತೀವ್ರ ಅಭದ್ರತೆಗೆ ತಳ್ಳಿದೆ. ಸಾಥಿನ್ ಯೂನಿಯನ್ನಿನ ಹೋರಾಟಕ್ಕೆ ಪ್ರತಿಸ್ಪಂದಿಸಿ ಅವರ ಗೌರವಧನವನ್ನು 500 ರೂ.ಗಳಿಗೆ ಹೆಚ್ಚಿಸುವದಾಗಿ ಬೇರೆ ಬೇರೆ ಸಂದರ್ಭಗಳಲ್ಲಿ ಭರವಸೆಯಿತ್ತು 9-1-95ರಲ್ಲಿ 5 ವರ್ಷ ಸೇವೆ ಪೂರೈಸಿರುವ ಸಾಥಿನರನ್ನೆಲ್ಲ ಕೆಲಸದಿಂದ ತೆಗೆಯುವ ಹೇಳಿಕೆ ಹೊರಡಿಸಿತು. ಮತ್ತೆ 5ನೇ ಜುಲೈ 95ರಲ್ಲಿ ಅವರನ್ನು ತೆಗೆಯುವ ಯಾವ ಉದ್ದೇಶವೂ ಇಲ್ಲವೆಂದು ಸಾರಿತು. ಜಿಲ್ಲೆಯೊಂದಕ್ಕೆ 100 ಮಂದಿ ಸಾಥಿನರಿರಬೇಕೆನ್ನುವ ಕಟ್ಟಳೆ ಸಂಪೂರ್ಣ ಸುಳ್ಳಾಗಿದೆ. 1992ರ ನಂತರ ಸಾಥಿನರು ಕೆಲಸದ ಹಕ್ಕಿಗಾಗಿ ಹೋರಾಟ ಪುನರಾರಂಭಿಸಿದ ನಂತರ ಒಂದೇ ಒಂದು ಹೊಸ ಸಾಥಿನನನ್ನು ನೇಮಿಸಿಕೊಳ್ಳಲಾಗಿಲ್ಲ. ಕೆಲಸದಿಂದ ತೆಗೆಯುವುದು ಮಾತ್ರ ಅಲ್ಲಲ್ಲಿ ನಡದೇ ಇದೆ.

4. ಈ ಕಾರ್ಯಕ್ರಮದ ದಿಕ್ಕು ಬದಲುಗೊಂಡಿದೆ. ಪ್ರಾರಂಭದಲ್ಲಿ ಹಳ್ಳಿಮಟ್ಟದ ಸಾಮಾಜಿಕ ಸಮಸ್ಯೆಗಳಿಗೆ ಆದ್ಯತೆ ದೊರೆಯುತ್ತಿತ್ತು. ಆದರೀಗ ಸಾಥಿನರು ಸರ್ಕಾರದ ಕಾರ್ಯಕ್ರಮಗಳ ಅನುಷ್ಠಾನಕ್ಕೆ ದುಡಿಯಬೇಕಾಗಿದೆ. ಹೀಗಾಗಿ ಸಾಥಿನರು ಈಗ ಸಾಮಾಜಿಕ ಬದಲಾವಣೆಯ ಕಾರ್ಯಕರ್ತೆಯರಿಂದ ಸರ್ಕಾರೀ ಇಲಾಖೆಗಳ ಗ್ರಾಮೀಣ ಕೆಲಸಗಾರರಾಗಿ ಪರಿವರ್ತಿತಗೊಂಡಿದ್ದಾರೆ.

5. ಸಾಥಿನರ ದಿನನಿತ್ಯದ ಕೆಲಸದ ಸ್ಥಿತಿಗತಿ ಅಪಾಯಕಾರಿಯಾಗಿದೆ. ಸಮುದಾಯದ ಕ್ರೂರ ಆಚರಣೆಗಳ ವಿರುದ್ಧ ಕೆಲಸ ಮಾಡುವ ಅವರು ಅಲ್ಲಿನ ಶಕ್ತಿಗಳ ಕೆಟ್ಟ ದೃಷ್ಟಿಗೆ ಒಳಗಾಗುತ್ತಾರೆ. ಸಮುದಾಯದಿಂದ ಅಪಾಯ ಎದುರಾದಾಗ ಅವರ ನೇಮಕಾತಿ ಮಾಡಿರುವ ಸರ್ಕಾರ ಅವರ ರಕ್ಷಣೆಗೆ ಬರುವುದಿಲ್ಲ. ಭಾನ್ವರೀದೇವಿಯ ಕತೆ ಇದಕ್ಕೊಂದು ಜ್ವಲಂತ ಉದಾಹರಣೆಯಾಗಿದೆ.

6. ಸಾಥಿನರ ಕೆಲಸವನ್ನು ಅಳೆಯುವಂತಹ ಯಾವುದೇ ಗುಣಾತ್ಮಕ ಅಳತೆ ಕೋಲಿಲ್ಲ. ಸಾಮಾಜಿಕ ಪರಿವರ್ತನೆ ಮತ್ತು ಮಹಿಳಾ ಸಶಕ್ತತೆಯ ಅವರ

ಕೆಲಸ ಗುರುತಿಸಲ್ಪಡದೇ ಮರೆಯಾಗಿ ಬಿಡುತ್ತದೆ. ಈ ಎಲ್ಲ ಅಂಶಗಳನ್ನು ಗಮನಕ್ಕೆ ತಂದುಕೊಂಡು

1. ಸಾಥಿನರ ಗೌರವಧನವನ್ನು ಈಗಿನ 250/–ರೂ. ಗಳಿಂದ ಸಾವಿರ ರೂ.ಗಳಿಗೆ ತಕ್ಷಣ ಏರಿಸಬೇಕು.
2. ಜಿಲ್ಲಾವಾರು ನೂರು ಸಾಥಿನರ ಟಾರ್ಗೆಟನ್ನು ತಕ್ಷಣ ತುಂಬಬೇಕು.
3. ಸಾಥಿನರಿಗೆ ಇಲಾಖಾ ವತಿಯಿಂದ ಬೆಂಬಲ ಸೃಷ್ಟಿಸಬೇಕು. ಕೆಲಸದ ಸನ್ನಿವೇಶದಲ್ಲಿ ಅವರಿಗೆ ಸೂಕ್ತ ಭದ್ರತೆ, ರಕ್ಷಣೆ ಒದಗಿಸಿಕೊಡಬೇಕು.

ಮಹಿಳಾ ಕೆಲಸಗಾರರಾಗಿ ಸಾಥಿನರ ಮೂಲಭೂತ ಹಕ್ಕುಗಳನ್ನು National Commission for Women ಎತ್ತಿ ಹಿಡಿಯಬೇಕೆಂದು "ಸಾಥಿನ ಸಂಘರ್ಷ ಸಮಿತಿ" ಕೇಳಿಕೊಂಡಿದೆ.

ಕರ್ನಾಟಕದ ಮಟ್ಟಿಗೆ ಹೇಳುವುದಾದರೆ, ಈಗಾಗಲೇ ಬಲಗೊಂಡಿರುವ 'ಅಂಗನವಾಡಿ' ಕಾರ್ಯಕರ್ತೆಯರ ಹೋರಾಟ, ಇದೀಗ ಬಲಗೊಳ್ಳುತ್ತಿರುವ 'ಮಹಿಳಾ ಸಮಖ್ಯಾ' ಕಾರ್ಯಕರ್ತೆಯರ ಹೋರಾಟಗಳು ತಮ್ಮ ಸ್ವರೂಪದಲ್ಲಿ ಸಾಥಿನರ ಹೋರಾಟದಂತಹವೇ ಆಗಿದ್ದು ಮಹಿಳೆಯರ ಕೆಲಸದ ಮೇಲಿನ ಮೂಲಭೂತ ಹಕ್ಕನ್ನು ಪ್ರತಿಪಾದಿಸುತ್ತವೆ.

**'ವೀಜಿ'**

## ಅಪ್ಪನ ಮಗಳು

ಅಪ್ಪನ ಜೊತೆಗೂಡಿ
ಆಡಿದ್ದು ಬಹಳ
ಬೆರತದ್ದು ಬಹಳ
ಅವರು,
ಉಂಡ ತಾಟಲ್ಲೇ ಉಂಡು
ಎಂಜಲು ಬಾಯನ್ನು
ಅವರ ಕೈಯ್ಗಳಿಗೇ ತಿಕ್ಕಿ
ಆ ಊರುಟು ಕೈಯ್ಗಳ
ಗೆರೆಗಳನ್ನು ಎಣಿಸುತ್ತಾ
ಅಪ್ಪನ; ಆಯುಸ್ಸಿನ ರೇಖೆಯನ್ನು
ಅಳೆದಳೆದು, ಉದ್ದ ಹೆಚ್ಚಿಸುವ
ಮುಗ್ಧತೆಯನ್ನು ದಾಟಿ,
ಕ್ಷಣಗಳನ್ನು ಹಂಚಿಕೊಂಡು
ಕಲಿತದ್ದು ಬಹಳ

ಮುಂದೊಂದು ದಿನ–
ಅದೇ ಅಪ್ಪ–
ಮಗನೂರಿನಲ್ಲಿ ತೀರಿಕೊಂಡಾಗ
'ಕುಲದಾಟಿದ' ಹೆಣ್ಣಾಗಿ
ಅಪ್ಪನ ಅದೇ ಮಗಳು
ದೂರದ ಮೂಲೆಯಲ್ಲಿ ಕೂತು
ಗಳಗಳನೆ ಕಣ್ಣೀರು ಸುರಿಸಿದರೂ
ಆ ಕಣ್ಣೀರು;
ಹೊಳೆಯಾಗಿ ಹರಿದು ಅಪ್ಪನ–
ದೇಹವನ್ನು ಮುಟ್ಟಲೂ ಇಲ್ಲ
ಆ ಮುಟ್ಟು - ಮೈಲಿಗೆ
ಈ ಮಗಳನ್ನು-
ತಟ್ಟಲೂ ಇಲ್ಲ!

**ನಿರ್ಮಲ**

# ಸೌಂದರ್ಯ ಸ್ಪರ್ಧೆಯ ಮಿಥ್ಯ-ಸತ್ಯಗಳು

**ಮಿಥ್ಯ :** ವರ್ಷದ ಅತ್ಯಂತ ಸುಂದರ ಹೆಣ್ಣನ್ನು ಆಯ್ಕೆ ಮಾಡುವುದೇ ಮಿಸ್ ಇಂಡಿಯಾ, ಮಿಸ್ ಯೂನಿವರ್ಸ್ ಮುಂತಾದ ಸೌಂದರ್ಯ ಸ್ಪರ್ಧೆಗಳ ಮುಖ್ಯ ಉದ್ದೇಶ.

**ಸತ್ಯ :** ಇದು ಮೇಲ್ನೋಟಕ್ಕೆ ಕಾಣುವ ಉದ್ದೇಶ ಅದೇನೆಯಾದರೂ, ಇಲ್ಲಿನ ಬಹು ಮುಖ್ಯ ಉದ್ದೇಶ ವೆಂದರೆ ಈ ಸ್ಪರ್ಧೆಗಳನ್ನು ಪ್ರಾಯೋಜಿಸುವ ಬೃಹತ್ ಉದ್ಯಮಗಳ ಉತ್ಪನ್ನಗಳ ಮಾರಾಟವನ್ನು ಮುಗಿಲಿಗೇರಿಸುವುದು. 95ರ ಫೆಮಿನಾ ಮಿಸ್ ಇಂಡಿಯಾ ಸೌಂದರ್ಯ ಸ್ಪರ್ಧೆಯನ್ನು ಉದಾಹರಣೆಗೆ ತೆಗೆದುಕೊಂಡರೆ ಅದನ್ನು ಪ್ರಾಯೋಜಿಸಿದ್ದು ಬಾಷ್ ಅಂಡ್ ಲಾಂಬ್, ಫಿಲಿಪ್ಸ್ ಮತ್ತು ಲಾಕ್ಮೆ ಮುಂತಾದ ಬಹುರಾಷ್ಟ್ರೀಯ ಕಂಪನಿಗಳು, ತಮ್ಮ ಉತ್ಪನ್ನಗಳ ಮಾರುಕಟ್ಟೆಗಾಗಿ, ಫೆಮಿನಾದಂತ ಪತ್ರಿಕೆಗೆ ತನ್ನ ಪ್ರಸರಣವನ್ನು ಹೆಚ್ಚಿಸಿಕೊಳ್ಳುವ ಅವಕಾಶ. ಹೀಗಾಗಿ ಇದು ಅತ್ಯಂತ ಲಾಭಕರ.

ಸೌಂದರ್ಯ ಸ್ಪರ್ಧೆಗಳು ಮತ್ತು ಅವುಗಳಲ್ಲಿ ಗೆಲ್ಲುವ 'ಸೌಂದರ್ಯರಾಣಿ'ಯರು ಜಾಹೀರಾತಿನ ಸಾಮಗ್ರಿಗಳಲ್ಲದೆ ಮತ್ತೇನೂ ಅಲ್ಲ. ಸ್ಪರ್ಧೆಯಲ್ಲಿ ಗೆದ್ದವರನ್ನು ಸಾರಾಸಗಟಾಗಿ ಒಂದು ವಾಣಿಜ್ಯ ಉತ್ಪನ್ನವನ್ನಾಗಿ ಮಾಡಿಬಿಟ್ಟು ಬಳಸಿಕೊಳ್ಳಲಾಗುತ್ತದೆ, ಮಾರಲಾಗುತ್ತದೆ. ಹಿಂದಿನ ವ್ಯೋಮ ಸುಂದರಿ ಸುಶ್ಮಿತಾ ಸೇನ್ ಕಳೆದ ಆಗಸ್ಟ್ 31ರಂದು ಅಮೆರಿಕದ ಕಂಪನಿ 'ಆ್ಯಪಲ್ ಕಂಪ್ಯೂಟರ್ಸ್'ಗೆ ಮಾಡಿದ್ದು ಇದನ್ನೇ. ಇವರಿಬ್ಬರೂ 'ಸೌಂದರ್ಯ ಕಿರೀಟ' ಧರಿಸಿಕೊಂಡ ತಕ್ಷಣದಲ್ಲೇ ಪೆಪ್ಸಿ ಕಂಪನಿಯೂ ಅವರನ್ನು ಬಾಡಿಗೆಗೆ ಹಿಡಿದುಬಿಟ್ಟಿತು. ಹೀಗೆ 'ಖ್ಯಾತನಾಮ'ರನ್ನು ಉಪಯೋಗಿಸಿ ಕೆಲ ನಯಾಪೈಸ ಕಿಮ್ಮತ್ತಿನ ಸುವಾಸಿತ ಬಣ್ಣದ ನೀರನ್ನು 6 ರೂ.ಗಳಿಗೆ ಸುಲಭವಾಗಿ ಮಾರಾಟ ಮಾಡುವಲ್ಲಿ ಯಶಸ್ವಿಯಾಯಿತು.

ಸುಶ್ಮಿತಾ ಸೇನಳಿಗೆ ವ್ಯೋಮ ಸುಂದರಿ ಪಟ್ಟ ಕಟ್ಟಿದ ಅದರ ಮಾಲೀಕರು ತಮ್ಮ ಕಂಪನಿಯನ್ನು ಪ್ರಪಂಚದಾದ್ಯಂತ ಪ್ರತಿನಿಧಿಸಲು 50 ಸಾವಿರ ಡಾಲರುಗಳಿಗೆ ಸುಶ್ಮಿತಾಸೇನ್‌ಳನ್ನು ನೇಮಿಸಿಕೊಂಡಿರುವುದಾಗಿ ಸಾರಿದರು.

**ಮಿಥ್ಯ :** ಸೌಂದರ್ಯ ಸ್ಪರ್ಧೆಯನ್ನು ವಿರೋಧಿಸಿ ಪ್ರತಿಭಟನೆ ಮಾಡುವವರು ಕುರೂಪಿಗಳು ಅಸಂತೃಪ್ತರು. ತಮ್ಮ ವಿನಾಕಾರಣದ ಪ್ರತಿಭಟನೆಗೆ ಅವರು ತೃಪ್ತಿಕರ ವಿವರಣೆ ಕೊಡಲಾರರು.

**ಸತ್ಯ :** ಅವರ ಪ್ರತಿಭಟನೆ ಇರುವುದು ಪ್ರಸ್ತುತ "ಸೌಂದರ್ಯ ಸ್ಪರ್ಧೆ" ಅಥವಾ ಯುವ ಸ್ಪರ್ಧಿಗಳ ವಿರೋಧವಾಗಿಯಲ್ಲ, ಈ ಸೌಂದರ್ಯ ಮತ್ತು ಸೌಂದರ್ಯ ಸ್ಪರ್ಧೆಗಳೆನ್ನುವುದನ್ನು ರೂಪಿಸಿರುವ, ಪ್ರಚಾರ ಮಾಡುತ್ತಿರುವ ಮತ್ತು ಮಾರುತ್ತಿರುವ ರೀತಿಗೆ ! ಉದಾಹರಣೆಗೆ, ಅವರ ಟೀಕೆಯಿರುವುದು, ಸ್ತ್ರೀ ಸೌಂದರ್ಯವನ್ನು ಅಳೆಯಲು ಒಂದು Quantifying method ಬಳಸುವುದು. ಅಂದರೆ,

ಮಿಸ್ ಅಮೆರಿಕ ಸ್ಪರ್ಧೆಯಲ್ಲಿ, ನೂರಕ್ಕೆ ನೂರು ಭಾಗ ಅಂಕಗಳು ದೇಹದ ಅಂಗಾಂಗಗಳಿಗೆ ಹೋಗುತ್ತವೆ. ತಲೆಯ ಆಕಾರಕ್ಕೆ 12 ಅಂಕಗಳು ; ಕಂಗಳಿಗೆ 10 ಅಂಕಗಳು ; ಕೂದಲಿಗೆ 5 ಅಂಕಗಳು ; ಮುಖಚರ್ಯೆಗೆ 10 ಅಂಕಗಳು....ಹೀಗೆ ಸಾಗುತ್ತದೆ.

ವಿಶ್ವಸುಂದರಿ ಸ್ಪರ್ಧೆಗೆ ಅದರ ಮಾಲೀಕರಾದ ಎರಿಕ್ ಮತ್ತು ಜೂಲಿಯ ಮೊರ್ಲೆಯವರ ಪ್ರಕಾರ, 17-25 ವರ್ಷ ವಯಸ್ಸಿನ ನವತರುಣಿಯರು-ಐದಡಿ ಏಳೂವರೆ ಇಂಚು ಎತ್ತರ, 1 ರಿಂದ ಒಂಬತ್ತು ಸ್ಟೋನುಗಳು, 22 ರಿಂದ 24 ಇಂಚು ಸೊಂಟದಳತೆ, ಮೂವತ್ತೈದರಿಂದ 36 ಇಂಚು ಗಾತ್ರದ ನಿತಂಬ (ಹೆಚ್ಚು ಕಡಿಮೆಯಾದರೆ ಹೋಯಿತು !), ತಲೆ ತುಂಬಾ ಕೂದಲು, ನಿಖರ ನಿರ್ದಿಷ್ಟ ಆಕಾರದ ಕಾಲುಗಳು....ಹೀಗಿರಬೇಕು. ಇಲ್ಲಿನ ಯಾವುದೇ ನ್ಯೂನತೆಗಳನ್ನು ಹಿಂದು-ಮುಂದುಗಳಿಂದ ಬಹು ಎಚ್ಚರಿಕೆಯಿಂದ ಪರೀಕ್ಷಿಸಿ ಕೊರತೆ ಕಂಡಲ್ಲಿ ಮನೆಗೆ ಕಳಿಸಲಾಗುವುದು.

ಕಂಪ್ಯೂಟರ್‌ಗಳು ಕೂಡ 'ಅತ್ಯಂತ' ಸುಂದರಿಯರ ಆಯ್ಕೆಯಲ್ಲಿ ಭಾಗವಹಿಸುತ್ತವೆ ! ಪ್ರತಿಯೊಂದು ಸಹ-ಗುಂಪಿನ ಸ್ಪರ್ಧೆಗಳಿಂದ ಬಂದ ವಿವರಗಳನ್ನು

ಕಂಪ್ಯೂಟರ್‌ಗೆ ಎಣಿಸಿ ಬಿಡಲಾಗುತ್ತದೆ. ಅದು ಒಂದರಿಂದ ಹತ್ತು ಸ್ಥಾನಗಳನ್ನು ನಿರ್ಧರಿಸಿ ಟಿವಿ ವೀಕ್ಷಕರಿಗೆ ಕೊಡುತ್ತದೆ. ಇಲ್ಲಿ ಪ್ರತಿಯೊಂದು ಬಿಡಿ ಸ್ಪರ್ಧೆಯ ಎಲ್ಲ ಫಲಿತಾಂಶಗಳನ್ನು ಬದಿಗಿರಿಸಿ ಒಟ್ಟಾರೆಯಾದ ತೀರ್ಪು ಕೊಡುತ್ತದೆ. ಈವರೆಗೆ ಮಾಡಿದ ಎಲ್ಲ Quantification ನಿಂದ ಸಾಧಿಸಿದ್ದಾದರೂ ಏನು ಎಂಬುದು ಮಾತ್ರ ಸ್ಪಷ್ಟವಿಲ್ಲ. ಸೌಂದರ್ಯವೆನ್ನುವುದನ್ನು ಅದು ಹೇಗೆ ಈ ರೀತಿಯಲ್ಲಿ ಅಳತೆ ಮಾಡಿ ರ್‍ಯಾಂಕ್ ಕೊಡಲಾಗುತ್ತದೆ ಎಂಬುದೇ ಪ್ರಶ್ನೆ. ಇಲ್ಲಿ ಆರಿಸಲ್ಪಟ್ಟ ತೀರ್ಪುಗಾರರು ಫ್ಯಾಶನ್ ಪ್ರಪಂಚದವರು, ಶೋ ಬಿಸಿನೆಸ್ಸಿನವರು, ರೂಪದರ್ಶಿ-ಸಿನೆಮಾ—ಸೌಂದರ್ಯವರ್ಧಕ ಕೈಗಾರಿಕೆಗಳವರೇ ಆಗಿರುತ್ತಾರೆ, ಹಿಂದಿನ ಸೌಂದರ್ಯ ರಾಣಿಯರಾಗಿರುತ್ತಾರೆ ಏಕೆ ? ಸ್ತ್ರೀ ಸೌಂದರ್ಯವೆನ್ನುವುದನ್ನು ನಿಶ್ಚಯಿಸುವವರು ಯಾರು ? ಮತ್ತು ಎಲ್ಲ ಅಂಶಗಳ ವಿಚಾರದಲ್ಲೂ ವಾದ-ವೈರುಧ್ಯಗಳಿಗೆ ಎಡೆಯಿರುವಾಗ ಈ 'ಅತ್ಯಂತ ಸುಂದರಿ' ಎಂಬೊಂದು ಕಲ್ಪನೆಗೆ ಪ್ರಯತ್ನಿಸುವದಾದರೂ ಏಕೆ ?

ಪ್ರತಿಭಟನೆಯ ಇನ್ನೊಂದು ನೆಲೆಯೆಂದರೆ, ನಿಜವಾಗಿಯೂ ಸೊಗಸುಳ್ಳ ವೌಲ್ಯವೊಂದನ್ನು ಕೊನೆಯಿಲ್ಲದ ಉಪಭೋಗಿ ಬಯಕೆಗಳಿಗಾಗಿ ಕೀಳು ಸಂಸ್ಕೃತಿಯನ್ನಾಗಿಸುವುದು. ಮತ್ತು ಹೀಗೆ ಮಾಡುವ ಮೂಲಕ ಹೆಂಗಸರು ನಿರಂತರವಾಗಿ ತಮ್ಮ 'ಲುಕ್' ಬಗ್ಗೆ ಗೀಳು ಹಿಡಿಸಿಕೊಳ್ಳುವಂತೆ ಮಾಡುವುದು.

'ಸೌಂದರ್ಯ ಸ್ಪರ್ಧೆಗಳು' ಹುಟ್ಟು ಹಾಕುವ 'ಸೌಂದರ್ಯದ ಕಲ್ಪನೆ' ಒಂದು ಬಗೆಯ ಸಂಕೀರ್ಣ ಮಾನಸಿಕ ಸಮಸ್ಯೆಯನ್ನು ಸೃಷ್ಟಿಸುತ್ತದೆ. ಅದು ಒಂದು ಬಗೆಯ ತನ್ನಲ್ಲೇ ಮೋಹಗೊಳ್ಳುವ ಸ್ಥಿತಿ. ಕನ್ನಡಿಗೆ ಅಂಟಿಕೊಳ್ಳುವ ಚಟ. ಈ ಬಗೆಯ "ಫ್ಯಾಷನ್-ಸೌಂದರ್ಯ ಪ್ರಜ್ಞೆ"ಯೇ ಸುಳ್ಳು ಅವಶ್ಯಕತೆಗಳ ಪೂರೈಕೆಯ ಸ್ಥಿತಿಯನ್ನು ನಿಯಂತ್ರಿಸುವುದು ಎಂದು ಬಾರ್‍ಸ್ಕಿ ಹೇಳುತ್ತಾಳೆ. ಇದು ಮಾನವ ದೇಹರಚನೆಯಲ್ಲಿನ ನಿಜವಾದ ಸೊಗಸಿನ ಹೊರಹೊಮ್ಮುವಿಕೆಗೆ ಮಾರಕವಾಗುತ್ತದೆ ; ಮೇಕಪ್ ಇಲ್ಲದೆ ಬೆಳಿಗ್ಗೆ ಮನೆ ಬಿಡಲು ಸಾಧ್ಯವಾಗದ ಹೆಂಗಸು ತನ್ನೊಳಗಿರುವ ಸೌಂದರ್ಯ, ಚಾರಿತ್ರ್ಯ, ಮತ್ತು ಅಭಿವ್ಯಕ್ತಿಗಳನ್ನು ಕಂಡುಕೊಳ್ಳಲಾರಳು.

ಇವೆಲ್ಲದರ ಜತೆಗೆ, 'ಸೌಂದರ್ಯ ಸ್ಪರ್ಧೆ'ಗಳು ಸೃಷ್ಟಿಸುವ ಸ್ತ್ರೀತ್ವದ ಬೇರೆ ಬೇರೆ ಕಲ್ಪನೆಗಳು, ಸೌಂದರ್ಯ ಸಾಧಕಗಳ ಹೆಚ್ಚು ಹೆಚ್ಚು ಬಳಕೆಗೆ ಹೆಂಗಸರನ್ನು ಸೆಳೆದು ಬಿಡುತ್ತವೆ. ಸೌಂದರ್ಯ ಕೈಗಾರಿಕೆಯು ಹೆಂಗಸರಿಗೆ ಸ್ವಯಂ ಮೋಹದ ಗೀಳು ಹಿಡಿಸುತ್ತಾ ಪಿತೃಪ್ರಧಾನತೆಗೆ ತಲೆ ಬಾಗುವ ಮತ್ತು ತನ್ನದೇ ಅಧೀನೀಕರಣಕ್ಕೆ ಸಹಕಾರಿಯಾಗುವ ಪ್ರವೃತ್ತಿಯನ್ನು ಬೆಳಸುತ್ತದೆ.

ಅಂತಿಮವಾಗಿ, ಪ್ರತಿಭಟನೆ ರಾಜಕೀಯ ಸ್ವರೂಪದ್ದು ಕೂಡ. ಈ ಸೌಂದರ್ಯ ಸ್ಪರ್ಧೆಗಳಲ್ಲಿ ಯಾರು ವಿಜೇತರಾಗುತ್ತಾರೆನ್ನುವುದು ಸೌಂದರ್ಯ ಕೈಗಾರಿಕೆಯ ಉತ್ಪನ್ನಗಳ ಮಾರುಕಟ್ಟೆಯ ಜತೆಗಿನ ಸಂಬಂಧದಲ್ಲಿ ಅಡಗಿರುತ್ತದೆ. ಸೌಂದರ್ಯ ಸಾಧಕಗಳು, ಅತಿ ಫ್ಯಾಷನ್ನಿನ ಒಡವೆಗಳು ಮತ್ತು ವಿನ್ಯಾಸಿತ ಉಡುಪುಗಳ ವಿದೇಶೀ ಕಂಪನಿಗಳು ತಮ್ಮ ಹೂಡಿಕೆಗಳಿಗೆ ಒಲವು ತೋರುತ್ತಿರುವ ದೇಶಗಳ, ಅವಕಾಶ ಸೃಷ್ಟಿಸುತ್ತಿರುವ ದೇಶಗಳ 'ಸುಂದರಿ'ಯರನ್ನು ವಿಜೇತಗೊಳಿಸುತ್ತವೆ. ಹೀಗೆ ಆ ದೇಶವನ್ನು ತಮ್ಮ ಮಾರುಕಟ್ಟೆಗೆ ತೆರೆಸಿಕೊಳ್ಳುತ್ತವೆ. ಹಿಂದೆ ಇದು ಲ್ಯಾಟಿನ್ ಅಮೆರಿಕಕ್ಕೆ ಆದರೆ ಈಗ ಇಂಡಿಯಾ ಸರದಿ. ಭಾರತದ ಒಬ್ಬ ವ್ಹೋಮ ಸುಂದರಿ ಸ್ಪರ್ಧಿಯೇ ಹೇಳುವಂತೆ, "ಸೌಂದರ್ಯ ಸ್ಪರ್ಧೆಯ ಸಂಘಟನಕಾರರು, ರಾಜಕೀಯ ಕಾರಣಗಳಿಗೆ ಈ ವರ್ಷ ಅಮೆರಿಕ ಮುಖ್ಯವಾಗುತ್ತದೆ, ಅಥವಾ ಥೈಲಾಂಡ್ ರಾಜಕೀಯವಾಗಿ ಮುಖ್ಯವಾಗುತ್ತದೆ ಎಂದು ಪರೋಕ್ಷವಾಗಿ ಹೇಳುತ್ತಾರೆ. ಇಂತಹ ದೇಶದವರನ್ನು ಆರಿಸಿ ಎಂದು ನೇರವಾಗಿ ಹೇಳುವುದಿಲ್ಲ". ಹೀಗೆ ವಿಜೇತರು ಕೃತಕವಾಗಿ ತಯಾರಾಗುತ್ತಾರೆ.

ಕೊನೆಯಲ್ಲಿ 'ಸೌಂದರ್ಯ ಸ್ಪರ್ಧೆಗೆ' ವಿರೋಧವಿರುವುದು ಭಾರತದಂತಾ ದೇಶದಲ್ಲಿ ಸೂಕ್ತ, ಸುರಕ್ಷಿತ ಜನನ ನಿಯಂತ್ರಣ ಮತ್ತು ಆರೋಗ್ಯ ಸೌಲಭ್ಯಗಳಂತಹ ಸಮಸ್ಯೆಗಳನ್ನು, ಕನಿಷ್ಟ ಕೂಲಿಯ ಪ್ರಶ್ನೆಗಳನ್ನು, ನಾಗರಿಕ ಮತ್ತು ಪ್ರಜಾತಾಂತ್ರಿಕ ಹಕ್ಕುಗಳ ಉಲ್ಲಂಘನೆಯ ಪ್ರಶ್ನೆಗಳನ್ನು ಇದು ತೆರೆಮರೆಗೆ ಸರಿಸುತ್ತದೆ.

**ಮಿಥ್ಯೆ** : "ಭಾರತದಲ್ಲಿನ ಹೆಂಗಸರು ಈಗ ತಮ್ಮ ಹಕ್ಕಿನ ಬಗ್ಗೆ ಜಾಗೃತರಾಗಿದ್ದಾರೆ....(ಮತ್ತು) ಮಗುವಿನ ಸೃಷ್ಟಿಯೇ ತಾಯಿಯಿಂದ ಮತ್ತು ಹೆಂಗಸು....ಪ್ರೀತಿ

ಯೆಂಬುದೇನು ಮತ್ತು ಹಂಚಿಕೊಳ್ಳುವುದು, ನೋಡಿಕೊಳ್ಳುವುದು ಎಂದರೇನೆಂದು ಗಂಡಸಿಗೆ ತೋರಿಸಿಕೊಡುತ್ತಾಳೆ. (1994ರ ವ್ಯೋಮ ಸುಂದರಿ ಸ್ಪರ್ಧೆಯ ಅಂತಿಮ ಹಂತದಲ್ಲಿ ಸುಶ್ಮಿತಾ ಸೇನ್ ಹೇಳಿದ್ದು).

**ಸತ್ಯ :** ಇಲ್ಲಿನ 'ಭಾರತದ ಹೆಂಗಸರು' ಎನ್ನುವುದು ಸುಶ್ಮಿತ ಸೇನಳನ್ನೂ ಒಳಗೊಂಡಂತೆ ಪಟ್ಟಣದ ಮಧ್ಯಮ ವರ್ಗದ ಒಂದು ಭಾಗಕ್ಕೆ ಅನ್ವಯಿಸುತ್ತದೆ. ಇಲ್ಲಿ ಪುರುಷ–ವ್ಯಾಖ್ಯಿತ ಲಿಂಗ ಪಾತ್ರಗಳನ್ನು ಸೇನ್ ಪ್ರಶ್ನಿಸುವುದಿಲ್ಲ. ಇಂದಿಗೂ ಮಹಿಳೆಯರು ಮನೆಗೆಲಸವನ್ನು (ಹೊರಗಡೆಯ ಕೆಲಸದ ಜತೆಗೆ) ಅಚ್ಚುಕಟ್ಟಾಗಿ ಮಾಡಿಕೊಂಡು ಹೋಗಬೇಕಾದ ಸ್ಥಿತಿ ಇದೆ, ಗಂಡಸರು ಹಂಚಿಕೊಳ್ಳುವುದು ದೂರದ ಮಾತೇ.

ಹೆಂಗಸರು ಆತ್ಮಸ್ಥೈರ್ಯ, ಆತ್ಮವಿಶ್ವಾಸಗಳನ್ನು ತೋರಿಸಬೇಕೆಂದು ಸೇನ್ ಕರೆ ಕೊಡುತ್ತಾಳೆ. ತಾನು ಹೆಂಗಸರನ್ನೆಲ್ಲಾ ಸ್ತ್ರೀವಾದೀಗಳಾಗಬೇಕೆಂದು ಖಂಡಿತಾ ಹೇಳುತ್ತಿಲ್ಲವೆಂದು ಒತ್ತಿ ಹೇಳುತ್ತಾ...."ಗಂಡಸರು ಮುಖ್ಯ. ಅವರಿಗೆ ಅವರ ಪಾಲಿನ ಗೌರವ ಕೊಡಬೇಕು. ಆದರೆ ನಿಮಗೇನು ಬೇಕೆಂದು ಅರಿತು ಅದನ್ನು ಪಡಕೊಳ್ಳಬೇಕು" !! ಎನ್ನುತ್ತಾಳೆ ಸ್ತ್ರೀವಾದವೆಂದರೆ ಸಮಾನ ಹಕ್ಕು ಮತ್ತು ನ್ಯಾಯಕ್ಕಾಗಿನ ಬೇಡಿಕೆಯೆಂಬುದನ್ನು ಗುರುತಿಸದೇ ಸ್ತ್ರೀವಾದವೆನ್ನುವುದು ಗಂಡಸರನ್ನು ಅವಮಾನಿಸುವಂತಹದ್ದು ಎಂಬಭಿಪ್ರಾಯದ "ಲಕ್ಮೆ–ಫೆಮಿನಿಸ್ಟ"ರಂತೆಯೇ ಈಕೆ.

ಹಾಗೆಯೇ ಆಕೆ ಮದರ್ ಥೆರೆಸಾರನ್ನು ಕುರಿತು "ಸಂಪೂರ್ಣ ನಿಸ್ವಾರ್ಥ, ಅರ್ಪಿಸಿಕೊಂಡ ಹೆಂಗಸು" ಎಂದು ಕೊಂಡಾಡುತ್ತಾ ಹೆಂಗಸರನ್ನು ಮನೆಗಂಟಿಸುವ ಪಿತೃಪ್ರಧಾನತೆಗೆ ತುಂಬಾ ಖುಷಿ ಕೊಡುವ ಮಾತಾಡುತ್ತಾಳೆ.

ತನಗೆ ಕಿರೀಟವನ್ನು ತಂದುಕೊಟ್ಟದ್ದೇ ಸ್ತ್ರೀತ್ವದ "ಮೂಲ ತಿರುಳು" ಎನ್ನುವ ಅವಳ ಮಾತು ದೊಡ್ಡ ವ್ಯಂಗ್ಯವನ್ನು ಬಯಲಿಗೆಳೆಯುತ್ತದೆ. ಭಾರತೀಯ ಸ್ತ್ರೀತ್ವದ ಮೇಲಿನ ಸುಶ್ಮಿತ ಸೇನಳ ಈ ಬಗೆಯ ನುಡಿಮುತ್ತುಗಳು ಸ್ತ್ರೀತ್ವ ಬಗೆಗಿರುವ ಮನೆಗಂಟಿಕೊಳ್ಳುವ ವಿಚಾರದಲ್ಲಿನ ಪ್ರಭಲವಾದ ಮಿಥ್ಯವನ್ನು ಬಲಗೊಳಸುತ್ತದೆ. ಪ್ರೊ. ಜೆ. ಬಗಚಿಯವರ ಪ್ರಕಾರ 'ಲಿಂಗಾಧಾರಿತ ಶ್ರಮ ವಿಭಜನೆ'ಯೆನ್ನುವುದೇ ಒಂದು ದೊಡ್ಡ ಮಿಥ್ಯೆಯಾಗಿದ್ದು ಹೆಂಗಸರನ್ನು ಉತ್ಪಾದಕರೆನ್ನುವುದಕ್ಕಿಂತ ಸಂತಾನೋತ್ಪಾದಕರೆಂದೇ ಪರಿಗಣಿಸುತ್ತದೆ.

ಮದರ್ ಥೆರೆಸಾ ಕುರಿತ ಸೇನಳ ಮಾತುಗಳು ಸ್ತ್ರೀತನದ ಬಗೆಗಿನ ಇನ್ನೊಂದು ಪ್ರಭಲ ಮಿಥ್ಯೆಯನ್ನು ಪ್ರತಿಪಾದಿಸುತ್ತದೆ. ಕೊನೆಯಿಲ್ಲದ ನೋವುಣ್ಣುವ, ಶೀಲವಂತ, ತ್ಯಾಗಮಯಿ ಸೂಪರ್ ಹೆಂಗಸಿನ ಕಲ್ಪನೆ ಅದು. ಅನುಕೂಲವಿರುವಲ್ಲಿ ಧರ್ಮಕ್ಕೆ ಅಂಟಿಕೊಳ್ಳುವ 'ಜನಪ್ರಿಯ' ಮಾಧ್ಯಮ ಲಿಂಗವಿಭಜನೆಗೆ ಕುಮ್ಮಕ್ಕು ಕೊಡುತ್ತದೆ. ದಿನಂಪ್ರತಿ ಬದುಕಿನ ಹೊರೆ ಹೆಂಗಸರನ್ನು ಅನೇಕ ಜನಪ್ರಿಯ ಮಿಥ್ಯೆಗಳಾದ ಗಂಡಸು ಊಟ ದುಡಿಯುವವನೆನ್ನುವ ನಂಬಿಕೆ, ಗಂಡು ಮಕ್ಕಳನ್ನು ಆರಾಧಿಸುವುದು, ರಕ್ಷಣೆಗೆಂಬಂತೆ ಮದುವೆಗಾಗಿ ಹಂಬಲಿಸುವುದು ಇತ್ಯಾದಿಗಳಿಗೆ ಕಟ್ಟು ಬೀಳುವಂತೆ ಮಾಡುತ್ತದೆ. ಆದರೆ ಬದುಕಿನ ಸತ್ಯ ಹೆಜ್ಜೆ ಹೆಜ್ಜೆಗೂ ಇದಕ್ಕೆ ವಿರೋಧವಾಗಿರುತ್ತದೆ. ತಮ್ಮ ಕೆಲಸಕ್ಕೆ ಸಾಮಾಜಿಕವಾದ ಕಿಮ್ಮತ್ತು ಇಲ್ಲ, ತಮ್ಮ ಮದುವೆಗಳು ಗಾಜಿನ ಮನೆಗಳಂತಿವೆ, ಹೆಣ್ಣು ಮಕ್ಕಳೇ ತಮ್ಮ ಅತಿ ದೊಡ್ಡ ಬೆಂಬಲಿಗರು ಎಂಬ ಸತ್ಯವನ್ನು ಕಂಡುಕೊಳ್ಳುತ್ತಾ ಹೋಗುತ್ತಾರೆ. ಇಲ್ಲಿ ಮತ್ತೆ ವರ್ಗ ಸದ್ದಿಲ್ಲದೆ ಕೆಲಸ ಮಾಡುತ್ತದ.

ಸುಶ್ಮಿತ ಸೇನ್ ಮತ್ತು ಐಶ್ವರ್ಯ ರೈರಂತಹ ಬಿಡುವಿರುವ ಮಧ್ಯಮವರ್ಗೀ ಹೆಂಗಸರು ತಮ್ಮೆಲ್ಲ ಬಿಡುವಾದ ಉಪಭೋಗೀ ಪ್ರವೃತ್ತಿಗಳೊಂದಿಗೆ, 'ಸ್ವಾತಂತ್ರ'ವೆಂಬ ಭ್ರಮೆಯೊಂದನ್ನು ಇವರ ತಲೆಯಲ್ಲಿ ತುಂಬುತ್ತಾರೆ.

ಅಂತಿಮವಾಗಿ ಸೇನ್ ಹೇಳುವ ತಾಯ್ತನ ಹೆಂಗಸಿನ ಶಕ್ತಿಯ ಸೆಲೆಯಾಗುವುದು ಇಂದಿನ ಸ್ಥಿತಿಯಲ್ಲಿ ಸಾಧ್ಯವಿಲ್ಲ. ಸಿಮೋನ್ ಹೇಳುವಂತೆ "ಹೆಂಗಸಿನ ತಾಯ್ತನ ಗಂಡಸಿನ ವಿಶೇಷವಾದ ಹಿಡಿತಕ್ಕೆ ಅವಳನ್ನು ಒಳಪಡಿಸುತ್ತದೆ. ಕನಿಷ್ಟ ಸಂರಕ್ಷಣ ಅಂಶಗಳಾದ ಪೋಷಣೆ, ಸುರಕ್ಷಿತ ಹೆರಿಗೆ, ಬಾಣಂತಿ ಶಿಶ್ರೂಷೆ, ಮಕ್ಕಳ ಪಾಲನಾ ಸೌಲಭ್ಯಗಳು, ಹೆಂಗಸರಿಗೆ, ಅದೂ ವಿಶೇಷವಾಗಿ ದುಡಿಯುವ ಬಡ ಗ್ರಾಮ್ಯ ಮಹಿಳೆಯರಿಗೆ ಇಲ್ಲ. ಸರ್ಕಾರ ತಾಯ್ತನಕ್ಕೆ ಕೊಡುವ 'ಉತ್ತೇಜ ಭತ್ಯೆ'ಗಳು ಸೈದ್ಧಾಂತಿಕ ಮಟ್ಟದಲ್ಲಾಗಲಿ ದ್ರವ್ಯದ ಮಟ್ಟದಲ್ಲಾಗಲೀ ಸಂಪೂರ್ಣ ಪಿತೃಪ್ರಧಾನ ಸ್ವರೂಪೀಯದ್ದೇ ಆಗಿವೆ".

# ಮತ್ತೊಮ್ಮೆ ನಮ್ಮ ಅಮ್ಮನೊಂದಿಗೆ ಒಟ್ಟುಗೂಡಲು ಸಹಾಯ ಮಾಡಿ !

ನನ್ನ ಹೆಸರು ಥೆರೆಸಾ ಕ್ರೂಸ್. ದೈಹಿಕ ಹಿಂಸೆಗೊಳಪಟ್ಟವಳು. ಈಗ ಜೀವಾವಧಿ ಶಿಕ್ಷೆ ಅನುಭವಿಸುತ್ತಿದ್ದೇನೆ. ಮನೆಯೊಳಗೆ ಹಿಂಸೆ ಅನುಭವಿಸುತ್ತ ಬದುಕುವುದು ತುಂಬಾ ನೋವಿನ ಸಂಗತಿ. ಮತ್ತೆ ಮತ್ತೆ ಆ ಹೊಡೆತಗಳು ನೆನಪಿಗೆ ಬರುತ್ತಿದೆ. ಬೆದರಿ ಕಂಗಾಲಾಗುತ್ತಿದ್ದೆ. ನನಗಿನ್ನು ನೆನಪಿದೆ....ತುಂಬಾ ಗಾಢ ನಿದ್ದೆಯಲ್ಲಿದ್ದೆ, ಬೆಳಗಿನ ಮೂರುವರೆ ಗಂಟೆಯಲ್ಲಿ ಎಚ್ಚರಗೊಂಡೆ, ಗಂಡಸೊಬ್ಬ ನನ್ನ ಕೋಣೆಯ ಬಾಗಿಲನ್ನು ಮುರಿದು....

ಹೀಗೆ ನಿರಂತರ ಭಯದಲ್ಲಿ ಥೆರೆಸಾ, ತನ್ನ ಮಕ್ಕಳೊಂದಿಗೆ ಅನೇಕ ವರ್ಷವಿದ್ದಳು. ಯಾವ ರೀತಿಯ ರಕ್ಷಣೆಯು ಆಕೆಗಿರಲಿಲ್ಲ, ಆಕೆಯ ಹದಿನೈದು ವಯಸ್ಸಿನ ಮಗಳು ಆಂಡ್ರಿಯಾ ಎನ್ನುತ್ತಾಳೆ—"ಹಿಂಸೆಯ ವಾತಾವರಣದಲ್ಲಿ ಬೆಳೆದ ಮಕ್ಕಳು ನಾವು. ನಮ್ಮ ತಾಯಿಯ ಹಾಗೆ ನಾವು ಬಲಿಪಶುಗಳು. ನೋವು, ಭೀತಿಯನ್ನಷ್ಟೆ ನಾವು ಅನುಭವಿಸಿದ್ದು. ನೆನಸಿಕೊಂಡರೆ ಈಗಲೂ ಭಯವಾಗುತ್ತದೆ. ಅಮ್ಮನೊಂದಿಗೆ ನಾವೆಲ್ಲ ಒಟ್ಟಿಗೆ ಮಲಗಿಕೊಳ್ಳುತ್ತಿದ್ದೆವು. ಅಮ್ಮ ಎದೆಯ ಮೇಲೆ ಫೋನಿಟ್ಟು ಮಲಗುತ್ತಿದ್ದಳು. ಯಾವ ಗಳಿಗೆಯಲ್ಲಾದರೂ ಅವನು ಬರಬಹುದಾಗಿದ್ದರಿಂದ ನಮಗೆ ಸಹಾಯದ ಅವಶ್ಯಕತೆಯಿತ್ತು. ಎಚ್ಚರವಾದಾಗ ಟೆಲಿಫೋನ್ ಹೊದಿಕೆಯೊಂದಿಗೆ ನೇತಾಡುತ್ತಿತ್ತು. "ಸಹಾಯ ಕೇಳಲು ನಾ ಬದುಕಿರುತ್ತೇನಾ?" ಎಂದು ಅರುಚಿಕೊಳ್ಳುತ್ತಿತ್ತು. ನಾವು ಪ್ರಾಣಿಗಳೊ ಎಂಬಂತೆ ನಮ್ಮ ಮೇಲೆ ಕ್ರೂರವಾಗಿ ನುಗ್ಗಿ ಬರುತ್ತಿದ್ದ. ಯಾರು ಸಹಾಯಕ್ಕೆ ಬರುತ್ತಿರಲಿಲ್ಲ. ಭೀತಿಯ ನೆರಳಲ್ಲಿ ನಾವು ದಿನ ನೂಕುತ್ತಿದ್ದೆವು."

ರಾಜ್ಯದ ಯಾವ ರಕ್ಷಣೆಯೂ ಇಲ್ಲದೆ, ಎಲ್ಲಾ ರೀತಿಯ ಸಹಾಯಗಳಿಂದಲೂ ವಂಚಿತಳಾದ ಥೆರೆಸ ಬೇಸತ್ತು ಗಂಡನಿಗೆ ಗುಂಡು ಹಾರಿಸಿದಳು. (ಕಾಲಿಗೆ ಗುಂಡು ತಗುಲಿದ ಆತ ಈಗ ಗುಣಮುಖನಾಗಿದ್ದಾನೆ). ಸಮಸ್ಯೆಗೆ ಇದು ಪರಿಹಾರವಲ್ಲ. ಆದರೂ ತನ್ನನ್ನು ಆ ಪರಿಸ್ಥಿತಿಗೆ ತಳ್ಳಿದ ಎಲ್ಲ ವಿಷಯಗಳನ್ನು ವಿಚಾರಣೆ ಸಮಯದಲ್ಲಿ ಪರಿಗಣಿಸಬೇಕೆಂದು ಥೆರೆಸಾ ಕೇಳಿಕೊಂಡಿದ್ದಾಳೆ. ಈ ವಿಷಯಗಳನ್ನು ಪರಿಗಣಿಸಲು ನ್ಯಾಯಾಧೀಶರು ಒಪ್ಪಿಕೊಳ್ಳಲಿಲ್ಲ. ಕಾರಣ ಈ ವಿಷಯಗಳು ಗಂಡನ ಮೇಲೆ ದುರಾಭಿಪ್ರಾಯ ಮೂಡಿಸಬಹುದು. ವ್ಯವಸ್ಥೆ ಯಾವುದೇ ರಕ್ಷಣೆ ನೀಡುವಲ್ಲಿ ಸೋತಿದೆ ಎಂದಾಗುವುದು. ಗಂಡನ ಹಿಂಸೆ ತಾಳಲಾರದೆ ಪ್ರತಿಸಾರಿ ಮನ ಬದಲಾಯಿಸಿದಾಗಲೂ ನಡೆದ ಘಟನೆಯ ಬಗ್ಗೆ ಪೋಲೀಸ್ ವರದಿ ಇದೆ. ಅವನ ಹಿಂಸಾಪ್ರವೃತ್ತಿ, ಮಾದಕ ವಸ್ತು ಸೇವನೆಗಳು ಬೆಳಕಿಗೆ ಬರಲೆ ಇಲ್ಲ. ಬದಲಿಗೆ ಅವರು ಬಹಳ ಒಳ್ಳೆಯ ವ್ಯಕ್ತಿಯೆಂದು ಪರಿಗಣಿಸಲಾಯ್ತು. ಜೈಲು ಶಿಕ್ಷೆಯಾದ ದಿನ ಅವನು ಅಟ್ಟಹಾಸದಿಂದ ನಕ್ಕ.

ನ್ಯಾಯಾಲಯದಲ್ಲಿ ನಡೆದ ಘಟನೆಗಳನ್ನು ವಿವರಿಸಲು ಥೆರೆಸಳಿಗೆ ಅವಕಾಶ ನೀಡಲಿಲ್ಲ. ಆಕೆಯ ವಕೀಲರು ಆಕೆಯ ಪರ ವಾದಿಸಲು ಯಾವ ಪ್ರಯತ್ನವನ್ನು ಮಾಡಲಿಲ್ಲ. ಅಷ್ಟು ಕೆಟ್ಟದ್ದಾಗಿ ವಕೀಲರು ಕೇಸನ್ನು ನಿರೂಪಿಸಿದ್ದನ್ನು ನಾನು ನೋಡಿಯೇ ಇರಲಿಲ್ಲ ಎಂದು ಥೆರೆಸಳ ಈಗಿನ ವಕೀಲರು ಹೇಳುತ್ತಾರೆ. ಹೊಸ ವಿಚಾರಣೆಗಾಗಿ ಫೆಡರಲ್ ಕೋರ್ಟಿನಲ್ಲಿ ಅರ್ಜಿ ಸಲ್ಲಿಸಬೇಕೆಂದಿರುವ ಥೆರೆಸ ಸಹಾಯಕ್ಕಾಗಿ ಸಹೃದಯರನ್ನು ಕೇಳಿಕೊಂಡಿದ್ದಾಳೆ.

ನಮ್ಮ ಸಹಾಯಕ್ಕಾಗಿ ಕೇಳಿಕೊಂಡಾಗ ವ್ಯವಸ್ಥೆಯಿಂದ ಯಾವ ರಕ್ಷಣೆಯೂ ಸಿಗಲಿಲ್ಲ. ಹಿಂಸೆಯಿಂದ ಅನಾಥವಾಗಿರುವ ನಮಗೆ, ನಮ್ಮ ತಾಯಿಯನ್ನು ಹಿಂತಿರುಗಿ ಪಡೆಯಲು ನಿಮ್ಮ ಸಹಾಯ ಕೇಳುತ್ತಿದ್ದೇವೆ. ಬೇರೆ ಯವರು ಮರೆತಂತೆ ನೀವೂ ನಮ್ಮನ್ನು ಮರೆಯಬೇಡಿ. ನಮಗೆ ಮತ್ತೊಂದು ಅವಕಾಶ ಬೇಕು. ನಮ್ಮ ಅಮ್ಮ ಇನ್ನೊಂದು ಅವಕಾಶಕ್ಕೆ ಅರ್ಹಳು, ಮತ್ತೆ ನಾವು ಒಟ್ಟುಗೂಡಲು ಸಹಾಯ ಮಾಡಿ. ನೀವು ನಮ್ಮ ಕುಟುಂಬದ ಭಾಗವಾಗಿ ನಮ್ಮ ಹೊರೆ ಇಳಿಸಲು ಸಹಾಯ ಮಾಡಿ ಎಂದು ನಿಮ್ಮನ್ನು ಕೂಗಿ ಕೇಳುತ್ತಿದ್ದೇವೆ. ಅಮ್ಮನ ಬಿಡುಗಡೆಗಾಗಿ ನಡೆಯುತ್ತಿರುವ ಪತ್ರ ಸಂಗ್ರಹ ಆಂದೋಲನದಲ್ಲಿ ಭಾಗವಹಿಸಿ—ಹೀಗೆಂದು ಥೆರೆಸಳ ಮಕ್ಕಳು ಸಹಾಯಕ್ಕಾಗಿ ಮೊರೆ ಇಟ್ಟಿದ್ದಾರೆ.